# ಮುನ್ನುಡಿ

"ವಿಜಯನಗರ ಸಾಮ್ರಾಜ್ಯ" ಕಾದಂಬರಿಮಾಲೆಯ ಐದನೆಯ ಕುಸುಮ "ಮೋಹನ ಮುರಾರಿ"ಯನ್ನು ಓದುಗರ ಕೈಯಲ್ಲಿಡಲು ಸಂತೋಷಿಸುತ್ತೇನೆ, ಇದರಲ್ಲಿ.

೧. ಮುಮ್ಮಡಿ ವಿರೂಪಾಕ್ಷರಾಯ (೧೪೬೬-೧೪೮೫)—೧೯ ವರ್ಷ
೨. ಸಾಳುವ ನರಸಿಂಹ (೧೪೮೫-೧೪೯೭)—೧೨ ವರ್ಷ
೩. ಇಮ್ಮಡಿ ನರಸಿಂಹ (೧೪೯೭-೧೫೦೫)— ೮ ವರ್ಷ
೪. ತುಳುವಂಶದ ನರಸನಾಯಕ (೧೪೯೯-೧೫೦೩)— ೪ ವರ್ಷ
೫. ವೀರನರಸಿಂಹ (೧೫೦೩-೧೫೦೯)— ೬ ವರ್ಷ

ಇವರ ಮೂವತ್ತುಮೂರು ವರ್ಷಗಳ ಆಳ್ವಿಕೆ ನಿರೂಪಿತವಾಗಿದೆ. ವೀರನರಸಿಂಹನಾನಂತರ ಪಟ್ಟಕ್ಕೆ ಬಂದವನೇ ಕೃಷ್ಣದೇವರಾಯ (೧೫೦೯-೧೫೩೦) ಅವನ ಇಪ್ಪತ್ತೊಂದು ವರ್ಷದ ಅಮೋಘ ರಾಜ್ಯಭಾರ ನನ್ನ ಮುಂದಿನ ಎರಡು ಕಾದಂಬರಿಗಳ (ಯಶೋದುಂದುಭಿ – ಅಭಯ ಪ್ರದಾನ) ವಸ್ತು.

ಈ ಭಾಗದಲ್ಲಿ ಬರುವ ಐವರು ಅರಸರ ಆಳ್ವಿಕೆಯಲ್ಲಿ ಸಾಳ್ವನರಸಿಂಹನ ಹನ್ನೆರಡು ವರ್ಷಗಳ ಆಳ್ವಿಕೆ ಒಂದು ಪರ್ವಕಾಲವಾಗಿತ್ತು. ಹದಿನೈದನೆಯ ಶತಮಾನದ ಕೊನೆಯಲ್ಲಿ ಅವನು ರಾಜ್ಯ ಸೂತ್ರಗಳನ್ನು ಹಿಡಿಯದಿದ್ದರೆ ವಿಜಯನಗರ ಸಾಮ್ರಾಜ್ಯ ನುಚ್ಚುನೂರಾಗಿ ಗಜಪತಿಗಳು, ಬಹುಮನಿಯವರ ಪಾಲಾಗುತ್ತಿತ್ತು. "ಮೋಹನ ಮುರಾರಿ" ಎಂಬುದು ಅವನಿಗಿದ್ದ ಬಿರುದುಗಳಲ್ಲೊಂದು. ಅದೇ ಹೆಸರನ್ನು ಈ ಕಾದಂಬರಿಗೆ ಕೊಟ್ಟಿದ್ದೇನೆ.

"ಮೋಹನ ಮುರಾರಿ" ರಚನೆಗೆ ಇತಿಹಾಸ ನನಗೊದಗಿಸಿರುವ ಸಾಮಗ್ರಿ ಪೂರ್ವಾಪರ ಸಂಬಂಧವಿಲ್ಲದುದಾಗಿದೆ. ಸಾಳುವನರಸಿಂಹ ಹೇಗೆ ಸಂಗಮವಂಶವನ್ನು ಮೂಲೆಗೊತ್ತಿ ವಿರೂಪಾಕ್ಷರಾಯನನ್ನು ಪದಚ್ಯುತನನ್ನಾಗಿ ಸಿದ ಎನ್ನುವುದು ಇತಿಹಾಸಕಾರರಿಗೂ ಸಮಸ್ಯೆಯಾಗಿದೆ. ಈ ಬಗ್ಗೆ ಸಿವಿಲ್, ಸೂರ್ಯನಾರಾಯಣರಾವ್, ಸಾಲತೊರೆ, ಹಯವದನರಾವ್, ವೆಂಕಟ ರಂಗಯ್ಯ ಯಾರೂ ಬೆಳಕು ಬೀರಿಲ್ಲ. ಕಾದಂಬರಿಯಲ್ಲಿ ಆ ಸಮಸ್ಯೆ ಬಿಡಿಸಿ

ದಲ್ಲದೆ ಗತ್ಯಂತರವೇ ಇಲ್ಲ. ನನಗೆ ದೊರೆತ ಸಾಮಗ್ರಿ ಹಾಗೂ ಸಮಕಾಲೀನ ರಾಜಕೀಯ, ಸಾಮಾಜಿಕ ಜೀವನವನ್ನು ಅನುಲಕ್ಷಿಸಿ ಈ ಸಮಸ್ಯೆ ಬಿಡಿಸ ಲೆತ್ನಿಸಿದ್ದೇನೆ.

ಸಾಳುವ ನರಸಿಂಹನ ಸಮಕಾಲೀನರೂ, ಗುರುಗಳೂ ಆದ ಮುಳುಬಾಗಿಲಿನ ಶ್ರೀ ಶ್ರೀಪಾದರಾಜರು ಮಹಾಮಹಿಮರು, ತಪೋಧನರು. ಇವರು ವಿಜಯನಗರದ ಸಾಮ್ರಾಜ್ಯದ ಅಭ್ಯುದಯಕ್ಕಾಗಿ ಸಲ್ಲಿಸಿದ ಸೇವೆ ಅಸಾಧಾರಣವಾದುದು. ಭಾಗವತ ಧರ್ಮವನ್ನು ಪ್ರತಿಪಾದಿಸಿ ಭಕ್ತಿಯ ಹೊನ್ನುಹೊಳೆ ಎಲ್ಲೆಲ್ಲಿಯೂ ಬಿತ್ತರಿಸುವಂತೆ ಮಾಡಿದ ಶ್ರೀ ಶ್ರೀಪಾದರಾಜರು ಕನ್ನಡ ಭಾಷೆಯನ್ನು ರಕ್ಷಿಸಿ, ಅದನ್ನು ಧರ್ಮಪೀಠದ ಮೇಲೆ ಪ್ರತಿಷ್ಠಾಪಿಸಿದರು. ಇವರ ಸಮಗ್ರ ಜೀವನವೃತ್ತಾಂತ, ಕೃತಿಪರಿಚಯ ಕಾದಂಬರಿಯಲ್ಲಿ ಹಾಸುಹೊಕ್ಕಾಗಿದೆ.

ಈ ಕಾದಂಬರಿಯಲ್ಲಿ ಬರುವ ಮತ್ತೊಬ್ಬ ಮಹಾವ್ಯಕ್ತಿ – ಮಹಮದ್ ಗವಾ೯. ಬಹಮನಿಯ ವಜೀರನಾಗಿದ್ದರೂ ಗವಾ೯ ಫಕೀರನಂತೆ ಬಾಳಿದ. ಅವನ ನಿಷ್ಕಳಂಕ ಜೀವನವೃತ್ತಾಂತ ಅಧಿಕಾರಸ್ಥಾನದಲ್ಲಿರುವವರಿಗೆ ಆದರ್ಶ ಪ್ರಾಯವಾಗಿದೆ.

"**ಮೋಹನ ಮುರಾರಿ**"ಯಲ್ಲಿ ಶ್ರೀವ್ಯಾಸರಾಜರ ಪ್ರಥಮ ಪರಿಚಯ ವಾಗುತ್ತದೆ. ಶ್ರೀ ಶ್ರೀಪಾದರಾಜರ ಶಿಷ್ಯರಾದ ಶ್ರೀವ್ಯಾಸತೀರ್ಥರು ಕೃಷ್ಣ ದೇವರಾಯನ ಆಳ್ವಿಕೆಯಲ್ಲಿ ಬಹಳ ದೊಡ್ಡ ಪಾತ್ರವಹಿಸಿ, ವಿಜಯನಗರ ಸಾಮ್ರಾಜ್ಯದ ಅನುಪಮ ಪೆರ್ಮೆಯ ಮೂಲಶಕ್ತಿಯಾಗಿದ್ದಾರೆ. ವೈಕುಂಠವಾಸಿ ಶ್ರೀ ಬೇಲೂರು ಕೇಶವದಾಸರು ಹೇಳಿರುವಂತೆ "೧. ವಿಜಯನಗರದ ಕರ್ಣಾಟಕ ರಾಜ್ಯಸ್ಥಾಪನೆಗೆ ಮುಖ್ಯಕಾರಣರು ವಿದ್ಯಾರಣ್ಯರು; ವಿಜಯನಗರದ ಉನ್ನತಿಯ ಪರಮಾವಧಿಗೆ ಮುಖ್ಯಕಾರಣರು ವ್ಯಾಸರಾಯರು. ೨. ವಿದ್ಯಾರಣ್ಯರ ಹೆಸರಿಲ್ಲದೆ ಕರ್ಣಾಟಕದ ಇತಿಹಾಸವೇ ಮೊದಲಾಗುವುದಿಲ್ಲ; ವ್ಯಾಸರಾಯರ ಹೆಸರಿಲ್ಲದೆ ಕರ್ಣಾಟಕದ ಅಭ್ಯುದಯವೂ ತಿಳಿಯುವುದಿಲ್ಲ. ೩. ಅದ್ವೈತಮತ ಸ್ಥಾಪಕರಾದ ಶಂಕರಚಾರ್ಯರ ಮಹಾಪೀಠದಲ್ಲಿ ಕುಳಿತು ಮಹಾಗ್ರಂಥಗಳನ್ನು ರಚಿಸಿ, ಶಂಕರಮತದ ಪುನರುದ್ಧಾರ ಮಾಡಿದವರು ವಿದ್ಯಾರಣ್ಯರು; ದ್ವೈತಮತ ಸ್ಥಾಪಕರಾದ ಮಧ್ವಾಚಾರ್ಯರ ಮಹಾಪೀಠದಲ್ಲಿ

ಕುಳಿತು ಮಹಾಗ್ರಂಥಗಳನ್ನು ರಚಿಸಿ, ಮಧ್ವಮತದ ಪುನರುದ್ಧಾರಮಾಡಿದವರು ವ್ಯಾಸರಾಯರು. ೪. ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯರೆಂಬ ಬಿರುದು ಗಳಿಸಿಕೊಂಡವರು ವಿದ್ಯಾರಣ್ಯರು; ಕರ್ಣಾಟಕ ಸಿಂಹಾಸನಾರೋಹಣಮಾಡಿ ಪ್ರತಿಷ್ಠಿತರಾದ ಮಹಿಮರು ವ್ಯಾಸರಾಯರು. ೫. ಕನಕವೃಷ್ಟಿಯನ್ನು ಕರೆಸಿ ಹುಕ್ಕಬುಕ್ಕರನ್ನು ಸಲಹಿದವರು ವಿದ್ಯಾರಣ್ಯರು; ಕುಹಯೋಗವೆಂಬ ವಿಪತ್ತಿನಿಂದ ಕೃಷ್ಣದೇವರಾಯನನ್ನು ಪಾರುಮಾಡಿ ಸಲಹಿದವರು ವ್ಯಾಸರಾಯರು. ೬. ವೇದವಿದ್ಯಾಪ್ರಚಾರಕ್ಕಾಗಿ ವಿದ್ವಜ್ಜನರುಗಳನ್ನು ಹುಡುಕಿ ಹುಡುಕಿ ಅಗ್ರಹಾರಗಳನ್ನು ಕಲ್ಪಿಸಿ, ಮಾನ್ಯಗಳನ್ನು ಕೊಡಿಸಿ ಧರ್ಮ ರಕ್ಷಣೆಮಾಡಿದವರು ವಿದ್ಯಾರಣ್ಯರು; ಸ್ವಯಂ ಸಿಂಹಾಸನಾರೂಢರಾದಾಗಲೇ ವಿದ್ವಜ್ಜನರಿಗೆ ಸ್ವಹಸ್ತದಿಂದ ಗ್ರಾಮಭೂಮಿಗಳ ಧಾರೆಯೆರೆದು ಧರ್ಮರಕ್ಷಣೆ ಮಾಡಿದವರು ವ್ಯಾಸರಾಯರು. ೭. ಸ್ವಯಂ ಕರ್ಣಾಟಕರಾಗಿ ಕನ್ನಡದಭಿಮಾನಿಗಳೆನಿಸಿದವರು ವಿದ್ಯಾರಣ್ಯರು; ಸ್ವಯಂ ಕರ್ಣಾಟಕರೂ ಆಗಿ, ಸಾವಿರಾರು ಕನ್ನಡ ದೇವರನಾಮ ಸುಳಾದಿಗಳನ್ನು ರಚಿಸಿ ಕನ್ನಡ ಮಾತೆಯ ಸೇವೆಮಾಡಿದವರು ವ್ಯಾಸರಾಯರು*" ಈ ಪುಣ್ಯಪುರುಷನ ಸಮಗ್ರಜೀವನ ವೃತ್ತಾಂತವನ್ನು ಮುಂದಿನ ಭಾಗದಲ್ಲಿ ನಿರೂಪಿಸಬೇಕೆಂದಿದ್ದೇನೆ.

ಇಲ್ಲಿಗೆ "ವಿಜಯನಗರ ಸಾಮ್ರಾಜ್ಯ"ದ ಇತಿಹಾಸ ಅರ್ಧಭಾಗದಷ್ಟು ಮುಗಿಯುತ್ತದೆ. ಉಳಿದರ್ಧಭಾಗವನ್ನು ಕ್ಷಿಪ್ರವಾಗಿ ಮುಗಿಸಬೇಕೆಂಬ ಆಕಾಂಕ್ಷೆಯುಳ್ಳವನಾಗಿದ್ದೇನೆ.

"**ಮೋಹನ ಮುರಾರಿ**"ಯ ರಚನೆಗೆ ಕೆಳಗೆ ಕಾಣಿಸಿರುವ ಗ್ರಂಥಗಳಿಂದ ನಾನು ನೆರವು ಪಡೆದಿದ್ದೇನೆ. ಅವುಗಳ ಕರ್ತರಿಗೆ ನನ್ನ ಕೃತಜ್ಞತೆ ಸಮರ್ಪಿಸುತ್ತೇನೆ.


1. Mysore Gazetter Editor : C. Hayavadna Rao Vol. II Part III
2. ,, ,, : Vol. V
3. ಶ್ರೀ ಕರ್ಣಾಟಕ ಭಕ್ತವಿಜಯ : ಬೇಲೂರು ಕೇಶವದಾಸರು
4. ಹರಿದಾಸ ಸಾಹಿತ್ಯ : ಪಂಚಮುಖಿ ರಾಘವೇಂದ್ರಾಚಾರ್ಯರು

5. ಹರಿಭಕ್ತ ಸುಧೆ : ರಂಗನಾಥ ದಿವಾಕರ

6. ಮಹಮುದ್ ಗವಾ೯ ಎಂಬ ಮಹಾ ಮಂತ್ರಿಯ ಚರಿತ್ರೆ : ಎಂ. ಎಸ್. ಪುಟ್ಟಣ್ಣ

7. ಶ್ರೀಶ್ರೀ ಪಾದರಾಯ ಸ್ವಾಮಿಗಳ ಮತ್ತು ಶ್ರೀವ್ಯಾಸರಾಯರ ಕೃತಿಗಳು : ಸುಬೋಧ ಎಂ. ರಾಮರಾವ್

8. Haridasas of Karnataka : A. P. Karmarkar

ಈ ಕೃತಿಯನ್ನು ಪ್ರಕಟಿಸಿ ಉಪಕರಿಸಿರುವ ಸ್ಟ್ಯಾಂಡರ್ಡ್ ಬುಕ್ ಡಿಪೋ ಒಡೆಯರಾದ ಗೆಳೆಯ ಶ್ರೀ ಎಚ್. ಕಮಲಾನಾಥರವರಿಗೆ ನನ್ನ ನೆನಕೆ ಸಲ್ಲಿಸುತ್ತೇನೆ.

೨೨-೧೧-೧೯೫೯ ಅ. ನ. ಕೃ

ಅ. ನ. ಕೃ ಅವರ

## 'ವಿಜಯನಗರ ಸಾಮ್ರಾಜ್ಯ'

| | | |
|---|---|---|
| * ೧. | ವಿಜಯ ವಿದ್ಯಾರಣ್ಯ | |
| * ೨. | ತಪೋಬಲ | |
| * ೩. | ಪುಣ್ಯಪ್ರಭಾವ | |
| * ೪. | ಪ್ರೌಢಪ್ರತಾಪಿ | |
| * ೫. | ಮೋಹನ ಮುರಾರಿ | |
| ೬. | ಯಶೋದುಂದುಭಿ | ಭಾಗ ೧ |
| ೭. | ಅಭಯಪ್ರದಾನ | ಭಾಗ ೨ |
| ೮. | ತೇಜೋಭಂಗ | |
| ೯. | ಅಳಿಯ ರಾಮರಾಯ | ಭಾಗ ೧ |
| ೧೦. | ವೀರಸ್ವರ್ಗ | ಭಾಗ ೨ |
| ೧೧. | ಪುನರೋದಯ | |
| ೧೨. | ಸಂಕ್ರಾಂತಿ | |

* ಈ ಗುರುತಿನವು ಈಗಾಗಲೇ ಪ್ರಕಟವಾಗಿವೆ.

# ಮೋಹನ ಮುರಾರಿ

## ೧

ಸಾಳುವ ನರಸಿಂಹ ನಾಯಕರು, ವಿರೂಪಾಕ್ಷರಾಯರ ಪಟ್ಟಾಭಿಷೇಕ ಮಹೋತ್ಸವದ ವ್ಯವಸ್ಥೆ ಮಾಡಲಾರಂಭಿಸಿದರು.

ಮಲ್ಲಿಕಾರ್ಜುನರಾಯರ ಪ್ರಬಲ ಮಿತ್ರರು ಹೇಳ ಹೆಸರಿಲ್ಲವಾಗಿದ್ದರೂ, ಅವರ ಅನೇಕ ಅಭಿಮಾನಿಗಳು ತಲೆ ಮರಸಿಕೊಂಡಿದ್ದರು.

ರಾಜ್ಯದಲ್ಲಿ ನಾಲ್ಕು ಬಣಗಳೇರ್ಪಟ್ಟಿದ್ದವು. ವಿರೂಪಾಕ್ಷರಾಯರ ಪಕ್ಷ ವಹಿಸಿದ್ದವರು; ಮಲ್ಲಿಕಾರ್ಜುನರಾಯರ ಅಭಿಮಾನಿಗಳಾಗಿದ್ದು, ವಿರೂಪಾಕ್ಷರಾಯರ ದುರ್ವರ್ತನೆಗೆ ಮುನಿದಿದ್ದವರು; ಸಾಳುವ ನರಸಿಂಹರ ನಿಕಟಾನುವರ್ತಿಗಳಾಗಿ ಸಂಗಮ ವಂಶದ ಬಗ್ಗೆಯೇ ವಿರೋಧ ತಳೆದಿದ್ದವರು; ಯಾವ ಪಕ್ಷಕ್ಕೂ ಸೇರದೆ ತಾಟಸ್ಥ್ಯಧೋರಣೆ ತಳೆದಿದ್ದವರು, ಈ ನಾಲ್ಕು ವರ್ಗದವರನ್ನು ಕೂಡಿಸಿ, ವಿರೂಪಾಕ್ಷರಾಯರ ಸಾಮ್ರಾಜ್ಯಪದ ನಿಷ್ಕಂಟಕ ವಾಗಿ ಸಾಗಲು ನರಸಿಂಹನಾಯಕರು ಪ್ರಯತ್ನಿಸಬೇಕಾಗಿತ್ತು.

ನರಸಿಂಹನಾಯಕರಲ್ಲಿ ಅನನ್ಯ ಭಕ್ತಿ ವಿಶ್ವಾಸ ತಳೆದು, ಅವರ ಸಮಸ್ತ ಕಷ್ಟಸುಖಗಳಲ್ಲಿ ಸಮಭಾಗಿಗಳಾಗಿ ಮಹೋಜ್ಜ್ವಲ ವಿಕ್ರಮತೆಗೆ ಹೆಸರಾಗಿದ್ದ ಅರವೀಟಿ ಬುಕ್ಕನಾಯಕರು,

"ನಿಮ್ಮ ಪ್ರಯತ್ನ ಸಫಲವಾಗುವುದೆಂದು ಭಾವಿಸಿರುವಿರಾ ನರಸಿಂಹ ನಾಯಕರೇ ?" ಎಂದು ಪ್ರಶ್ನಿಸಿದರು.

"ನಿಮಗೆ ಅನುಮಾನವೇ ?"

"ಈ ಬಗ್ಗೆ ಅನುಮಾನ ತಳೆದಿರುವ ಸಹಸ್ರಾರು ಜನರಲ್ಲಿ ನಾನೂ ಒಬ್ಬ."

"ಕಾರಣ ವಿವರಿಸುವಿರಾ ?"

"ಮಲ್ಲಿಕಾರ್ಜುನರಾಯರು ದುರ್ಬಲರೇ ವಿನಾ ದುಷ್ಟರಲ್ಲ; ಅವರ

ದೌರ್ಬಲ್ಯದಿಂದ ಸಾಮ್ರಾಜ್ಯದ ಭದ್ರತೆಗೆಲ್ಲಿ ಅಪಾಯ ಸಂಭವಿಸುವುದೋ ಎಂದು ಹೆದರಿ ನೀವು ವಿರೂಪಾಕ್ಷರಾಯರಿಗೆ ನೆರವಾದಿರಿ "

" ಹೌದು."

"ವಿರೂಪಾಕ್ಷರಾಯರು ದುರ್ಬಲರು ಮಾತ್ರವೇ ಅಲ್ಲ, ದುಷ್ಟರೂ ಆಗಿದ್ದಾರೆ. ಭೋಗಪರಾಯಣರೂ, ಹಿಂಸಾಪ್ರಿಯರೂ ಆದ ವಿರೂಪಾಕ್ಷರಾಯರಿಂದ ವಿಜಯನಗರ ಸಾಮ್ರಾಜ್ಯ ಸಂರಕ್ಷಿಸಲ್ಪಡುತ್ತದೆಯೆಂದು ತಾವು ತಿಳಿದಿರುವುದು ನನಗೆ ಪರಮಾಶ್ಚರ್ಯವನ್ನುಂಟುಮಾಡುತ್ತದೆ."

"ಇಂದಿನವರೆಗೆ ಅವರ ದೌರ್ಬಲ್ಯ, ದೌಷ್ಟ್ಯಗಳೆರಡೂ ನನ್ನ ಕಣ್ಣಿಗೆ ಬಿದ್ದಿಲ್ಲ."

"ಬಿದ್ದರೆ........ ?"

"ನನಗೆ ಬೇಕಾದದ್ದು ವಿಜಯನಗರ ಸಾಮ್ರಾಜ್ಯರಕ್ಷಣೆ. ರಾಜರಿಂದಾಗಲಿ, ಸೈನ್ಯಬಲದಿಂದಾಗಲಿ ಒಂದು ಸಾಮ್ರಾಜ್ಯ ಕಟ್ಟಿ, ಉಳಿಸಿ, ಬೆಳಸಿಕೊಳ್ಳುವುದಕ್ಕಾಗುವುದಿಲ್ಲ ಎಂಬುದನ್ನು ನಾನು ಚೆನ್ನಾಗಿ ಬಲ್ಲೆ. ರಾಜನ ತಪಸ್ಸು, ಪ್ರಜಾಸ್ತೋಮದ ಸಾಮೂಹಿಕ ಶಕ್ತಿ ಇವೇ ವಿಜಯನಗರ ಸಾಮ್ರಾಜ್ಯದ ರಕ್ಷಾಕವಚಗಳು. ತಪೋಭ್ರಷ್ಟನಾದ ರಾಜ. ಆ ಸ್ಥಾನ ಅಲಂಕರಿಸಲು ಅರ್ಹನಲ್ಲ. ಶಕ್ತಿ ಸಮ್ಮಾರ್ಜನೆ ಮಾಡಿಕೊಂಡು, ಅದನ್ನು ಸಾಮ್ರಾಜ್ಯಹಿತಕ್ಕೆ ನಿವೇದಿಸದ ಪ್ರಜಾಸ್ತೋಮ ವರ್ತಮಾನ, ಭವಿಷ್ಯತ್ತುಗಳೆರಡಕ್ಕೂ ಕಳಂಕಪ್ರಾಯವಾಗಿದೆ ಈ ಉಭಯ ಉಪಟಳಗಳನ್ನು ನಾವು ಧೀರರಂತೆ ಎದುರಿಸಬೇಕು. ಪಟ್ಟಾಭಿಷೇಕ ಮಹೋತ್ಸವ ನಡೆದು ಹೋಗಲಿ. ತರುವಾಯ ನಾನು ವಿರೂಪಾಕ್ಷರಾಯರೊಂದಿಗೆ ಎಲ್ಲ ವಿಷಯಗಳನ್ನೂ ಚರ್ಚಿಸುತ್ತೇನೆ."

"ವಿರೂಪಾಕ್ಷರಾಯರು ನಿಮ್ಮ ಮಾತಿಗೆ ಕಿವಿಗೊಡುವರೆಂದು ಭಾವಿಸಿರುವಿರಾ?"

"ಏಕೆ ?"

"ತಿರುಪತಿಯ ಅರ್ಚಕರ ಕೈಗೊಂಬೆಯಂತೆ ಅವರು ಕುಣಿಯುತ್ತಿದ್ದಾರೆ. ಈ ಅರ್ಚಕರ ಹೇಯಜೀವನ, ದುರ್ವ್ಯಾಪಾರ ಕಂಡು ನನ್ನ ಮೈಯಲ್ಲಿ ಉರಿಯೆದ್ದಿದೆ. ತಿರುವೆಂಕಟನಾಥನಿಗೆ ಭಕ್ತಾದಿಗಳು ಅರ್ಪಿಸಿದ ಒಡವೆ ವಸ್ತ್ರಗಳನ್ನು ಅರ್ಚಕರು ಧಾರಾಳವಾಗಿ ಸ್ವಂತಕ್ಕೆ ಉಪಯೋಗಿಸಿಕೊಳ್ಳುತ್ತಿದ್ದಾರೆ. ದೇವರ

ರಥದ ಮೇಲೆ ಕುಳಿತು ಮೆರೆಯುತ್ತಾರೆ. ಭಗವದ್ದರ್ಶನಾಕಾಂಕ್ಷಿಗಳಾಗಿ ಬರುವ ಬಡಭಕ್ತರನ್ನು ಹಿಂಸೆಮಾಡಿ ಸುಲಿಯುತ್ತಾರೆ. ತಿರುವೆಂಕಟನಾಥನನ್ನು ಕಾಡುತ್ತಿರುವ ಈ ಬ್ರಹ್ಮರಾಕ್ಷಸರು ಈಗ ವಿಜಯನಗರ ದೊರೆಗಳನ್ನು ಕಟಳಿಸಿದ್ದಾರೆ."

"ಅದನ್ನು ನಾನು ಬಲ್ಲೆ ಬುಕ್ಕನಾಯಕರೇ, ಸಾಮಭೇದದಾನ ನಿಷ್ಫಲವಾದಮೇಲೆ ದಂಡಧರಿಸಬೇಕು. ಉಗುರುಹುಣ್ಣಿಗೆ ಕೊಡಲಿ ಪ್ರಯೋಗಿಸುವುದು ಜಾಣತನವಲ್ಲ – ನಾನೊಂದು ಆಶ್ವಾಸನವನ್ನು ನಿಮಗೆ ಕೊಡಲಿಚ್ಛಿಸುತ್ತೇನೆ. ಮಹಾಗುರು ಶ್ರೀಶ್ರೀ ವಿದ್ಯಾರಣ್ಯಮುನಿಗಳ ಅಲೌಕಿಕ ಸಿದ್ಧಿಯ ಪ್ರತೀಕವೇ ಈ ವಿಜಯನಗರ ಸಾಮ್ರಾಜ್ಯ. ಅವರ ತರುವಾಯದವರಾದ ನಾವು ಇಂಥ ಇನ್ನೊಂದು ಸಾಮ್ರಾಜ್ಯ ಕಟ್ಟುವಮಾತು ಕನಸಿನದು; ಅವರು ಕಟ್ಟಿಕೊಟ್ಟಿರುವ ಸಾಮ್ರಾಜ್ಯದ ಕೀರ್ತಿ ಉಜ್ವಳಿಯದಂತೆ ಉಳಿಸಿಕೊಳ್ಳುವುದು ನಮ್ಮ ಆದ್ಯಕರ್ತವ್ಯ. ನಾನಿಂದು ವಿಜಯನಗರದ ಧವಳಕೀರ್ತಿಗೆ ಪ್ರಪ್ರಥಮ ಸ್ಥಾನ ಕೊಡುತ್ತೇನೆ. ಅದರ ರಕ್ಷಣೆ ಪೋಷಣೆಗಾಗಿ ಸಮಸ್ತ ಪ್ರಜರು, ದೊರೆಗಳು, ನಾನು ನೀವು ಬದ್ಧಕಂಕಣರಾಗಬೇಕು. ಯಾರು ಕರ್ತವ್ಯಲೋಪದ ದೋಷಕ್ಕೆ ಗುರಿಯಾದರೂ ಅಕ್ಷಮ್ಯರಾಗುತ್ತಾರೆ."

"ನಾವೀಗ ಮಾಡತಕ್ಕದ್ದೇನು ?"

"ನೀವು, ಚಿಟ್ಟಿ ಗಂಗಣ್ಣನವರು, ಈಶ್ವರ ನಾಯಕರು, ನರಸನಾಯಕರು ಸಾಮ್ರಾಜ್ಯದ ವಿವಿಧ ಬಣಗಳನ್ನು ಒಂದುಗೂಡಿಸಲೆತ್ನಿಸಬೇಕು. ಅದರ ಸಂಕೇತವಾಗಿ ಅನುಪಮ ವೈಭವದಿಂದ ವಿರೂಪಾಕ್ಷರಾಯರ ಪಟ್ಟಾಭಿಷೇಕ ನೆರವೇರಲಿ. ಉತ್ಸವಾದಿಗಳು ಮುಗಿದಾನಂತರ ನಾವೆಲ್ಲರೂ ಸಮಾಲೋಚನೆ ನಡಸಿ, ದೊರೆಗಳಿಗೆ ಮಾರ್ಗದರ್ಶನ ಮಾಡೋಣ."

"ಅವರು ನಮ್ಮ ಮಾರ್ಗದರ್ಶನವನ್ನು ಪೇಕ್ಷಿಸಿದರೆ ?"

"ದಂಡವಿದ್ದೇ ಇದೆ. ಅದಕ್ಕೇಕೆ ಯೋಚನೆ" ಎಂದು ನರಸಿಂಹನಾಯಕರು ವೀರ ನಿರ್ಧಾರದಿಂದ ನುಡಿದರು.

"ಚಂದ್ರಗಿರಿಯ ಅರಮನೆಯ ಕಟ್ಟಡದ ಕೆಲಸ ಯಾವಾಗ ಆರಂಭಿಸಲಿ."

"ಪಟ್ಟಾಭಿಷೇಕ ಮಹೋತ್ಸವ ಮುಗಿದ ಕೂಡಲೆ ಆರಂಭವಾಗಬೇಕು.

ಎಲ್ಲ ಕಡೆಗಳಿಂದಲೂ ಶಿಲ್ಪಿಗಳನ್ನು ಬರಮಾಡಿ ಕಟ್ಟಡದ ಕೆಲಸ ಬೇಗ ಮುಗಿಸಿ."

"ಈಶ್ವರ ನಾಯಕರನ್ನು ಅದಕ್ಕಾಗಿಯೇ ನಿಯೋಜಿಸುತ್ತೇನೆ."

"ಚಂದ್ರಗಿರಿ ಅರಮನೆಯ ಜವಾಬುದಾರಿ ನಿಮಗೆ ವಹಿಸಿದ್ದೇನೆ. ಹೇಗೆ ಅನುಕೂಲವೋ ಹಾಗೆ ನೀವು ನಿರ್ವಹಿಸಬಹುದು. ನವರಾತ್ರಿ ಪಾಡ್ಯ ದೊಳಗೆ ಅರಮನೆ ಸಿದ್ಧವಾದರೆ ನಾವು ಅಲ್ಲಿಯೇ ದಸರಾ ಮಹೋತ್ಸವ ನೆರವೇರಿಸಲು ಅನುಕೂಲವಾಗುತ್ತದೆ."

"ಸರ್ವವಿಧದಿಂದಲೂ ಪ್ರಯತ್ನಿಸಿ, ಸಕಾಲಕ್ಕೆ ಅರಮನೆ ಸಿದ್ಧವಾಗು ವಂತೆ ಮಾಡುತ್ತೇನೆ."

ಎಂದು ಬುಕ್ಕನಾಯಕರು ಆಶ್ವಾಸನವಿತ್ತರು.

# ೨

ಪಟ್ಟಾಭಿಷೇಕ ಮಹೋತ್ಸವದ ವಿಜೃಂಭಣೆಗೆ ಯಾವ ಕೊರತೆಯೂ ಇರಲಿಲ್ಲ. ಸಾಮ್ರಾಜ್ಯದ ಪರಂಪರೆಗನುಗುಣವಾಗಿ ಹೋಮ, ಹವನಾದಿಗಳೂ, ಪೂಜೆಗಳೂ ಆಚರಿಸಲ್ಪಟ್ಟವು. ಪಂಡಿತರು, ಗಮಕಿಗಳು, ವಾದಿಗಳು ಕುಶಲ ಕಲಾವಿದರು, ಲಲಿತ ಕಲಾವಿದರಿಗೆಲ್ಲಾ ಯೋಗ್ಯತಾನುಸಾರ ಪಾರಿತೋಷಕಗಳೂ, ಖಿಲ್ಲತ್ತುಗಳೂ ಕೊಡಲ್ಪಟ್ಟವು.

ಜನರಲ್ಲಿ ಮಾತ್ರ ಹಾರ್ದಿಕ ಸಂತೋಷದ ಅಭಾವ ಕಂಡುಬರುತ್ತಿತ್ತು. ಯಾರದೋ ಬಲವಂತಕ್ಕೆ ಅವರು ಅಪ್ರಿಯವಾದ ಕೆಲಸವೊಂದನ್ನು ನಿರ್ವಹಿಸುವಂತಿತ್ತು. ಪ್ರಭುದರ್ಶನವಾದೊಡನೆಯೇ ಹುಚ್ಚೆಗೆದ್ದು ಜಯ ಜಯಕಾರ ಘೋಷಿಸುತ್ತಿದ್ದ ಜನತೆ, ಬಲವದ್ಬಂಧನಕ್ಕೊಳಗಾಗಿ ' ಜಯ ಜಯ ವಿರೂಪಾಕ್ಷರಾಯ, ಮಹಾರಾಯ ' ಎಂದಿತು.

ವಾತಾವರಣದ ಗಭೀರತೆಯನ್ನೂ, ಜನಮನದಲ್ಲಿ ಮೂಡಿದ್ದ ಭಾವನೆಗಳನ್ನೂ ನರಸಿಂಹನಾಯಕರು ಗ್ರಹಿಸಿದರು. ವೈಷ್ಣವರ ಬಗ್ಗೆ ರಾಯರು ತೋರುತ್ತಿದ್ದ ವಿಶೇಷ ಅಭಿಮಾನವೂ ನರಸಿಂಹನಾಯಕರ ಗಮನ ಸೆಳೆಯಿತು.

ಹದಿನೈದು ದಿನಗಳು ಸತತವಾಗಿ ಉತ್ಸವ ಸಾಗಿತು.

ಈ ಸಮಯದಲ್ಲೇ ನರಸಿಂಹನಾಯಕರನ್ನು ಗೌರವಿಸಿ ಜನಾದರಣೆಯನ್ನು ದೊರಕಿಸಿಕೊಳ್ಳಬೇಕೆಂದು ವಿರೂಪಾಕ್ಷರಾಯರು ಹಂಚಿಕೆ ಹೂಡಿದರು. ಪ್ರಭುಗಳ ಮನೋವಾಂಛಿತವನ್ನರಿತ ನರಸಿಂಹನಾಯಕರು,

"ಉತ್ಸವ ಮುಗಿಯಲಿ. ಆಮೇಲೆ ವಿಚಾರ ಮಾಡೋಣ" ಎಂದಿದ್ದರು.

' ನರಸಿಂಹನಾಯಕರು ಏನನ್ನು ಅಪೇಕ್ಷಿಸುತ್ತಿದ್ದಾರೆ.

' ನಾಳೆ ಅವರು ಮಹಾಪ್ರಧಾನಿಪಟ್ಟ ಬಯಸಿದರೆ ಏನು ಮಾಡುವುದು?'

ಎಂಬ ಚಿಂತೆ ವಿರೂಪಾಕ್ಷರಾಯರನ್ನು ಕಬಳಿಸಿತು.

ತಮ್ಮ ಸಕಲ ಶ್ರೇಯಸ್ಸಿಗೂ ನರಸಿಂಹನಾಯಕರೇ ಕಾರಣವೆಂದರಿತಿದ್ದ ವಿರೂಪಾಕ್ಷರಾಯರು, ಅಂತರಂಗದಲ್ಲಿ ನಾಯಕರನ್ನು ಕಂಡರೆ ಹೆದರುತ್ತಿದ್ದರು.

ಅತುಲ ಪರಾಕ್ರಮಿಗಳೂ, ರಾಜಕಾರಣ ಕುಶಲರೂ ಆದ ನರಸಿಂಹನಾಯಕರು ಶ್ರೇಷ್ಠ ಜ್ಯೇಷ್ಠ ಅಧಿಕಾರಸ್ಥಾನಕ್ಕೆ ಬಂದರೆ, ತಮ್ಮ ಅಸ್ತಿತ್ವವೇ ಅಲುಗಾಡಬಹುದೇನೋ ಎಂಬ ಭಯವೂ ಅವರನ್ನು ವ್ಯಾಪಿಸಿತು.

ಬಿಸಿ ತುಪ್ಪವನ್ನು ಕುಡಿದಂತಾಗಿದ್ದ ವಿರೂಪಾಕ್ಷರಾಯರಿಗೆ ನರಸಿಂಹನಾಯಕರ 'ವಿಳಂಬನೀತಿ' ಯೇ ಸದ್ಯಕ್ಕೆ ಪ್ರಿಯವಾಗಿ ಕಂಡುಬಂದಿತು.

ಹದಿನಾರನೆಯ ದಿನ ನರಸಿಂಹನಾಯಕರನ್ನು ಅರಮನೆಗೆ ಬರಮಾಡಿಕೊಂಡ ವಿರೂಪಾಕ್ಷರಾಯರು,

"ನಿಮ್ಮ ಮಹಪ್ರಯತ್ನದಿಂದ ಉತ್ಸವವೆಲ್ಲಾ ಯಶಸ್ವಿಯಾಗಿ ನಡೆದು ನಮ್ಮ ಮನಸ್ಸಿಗೆ ಸಂತೋಷವಾಗಿದೆ. ನಮ್ಮ ಶ್ರೇಯಸ್ಸಿಗೆ ಮೂಲಕಾರಣರಾದ ನಿಮ್ಮನ್ನು ಆ ಕಾಲದಲ್ಲಿಯೇ ಗೌರವಿಸಬೇಕೆಂದು ನಮ್ಮ ಅಭೀಷ್ಟವಾಗಿತ್ತು. – ಆಗ ನೀವೇ ನಿರಾಕರಿಸಿದಿರಿ. ಉತ್ಸವ ಮುಗಿದಿದೆ. ಇನ್ನಾದರೂ ನೀವು ನಮಗೆ ಅವಕಾಶ ಕೊಡಬೇಕು"

"ಸಾಮ್ರಾಜ್ಯ ಸೇವೆ, ಪ್ರಭು ಸೇವೆಮಾಡುವ ಗೌರವಕ್ಕಿಂತ ಹೆಚ್ಚಿನ ಗೌರವವೇಕೆ. ನಾನು ತೃಪ್ತನಾಗಿದ್ದೇನೆ."

"ಹಾಗೆ ತಾವು ಹೇಳಿದಲ್ಲಿ ನಮಗೆ ಸಮಾಧಾನವಾಗಲಾರದು. ತಮ್ಮ ಅಪೇಕ್ಷೆ ಏನಿದೆಯೆಂಬುದನ್ನು ನಿಸ್ಸಂಕೋಚವಾಗಿ ತಿಳಿಸಬೇಕು."

"ನನ್ನ ಅಪೇಕ್ಷೆ ಈಡೇರಿಸುವಿರಾ ?

"ಅಗತ್ಯವಾಗಿ"

"ಹಿರಿಯರ ಪರಂಪರೆಯಲ್ಲಿ ತಾವು ಮುನ್ನಡೆಯಬೇಕು. ಕೀರ್ತಿಶೇಷರಾದ ಶ್ರೀಶ್ರೀ ಬುಕ್ಕರಾಯರ 'ಮಹಾಶಾಸನ' ಸರ್ವಧರ್ಮಸೌಹಾರ್ದದ ಪ್ರಣಾಳಿಕೆಯಾಗಿದೆ. ಅದೇ ತಮ್ಮ ತೋರುಬೆಳಕಾಗಬೇಕು. ರಾಜ್ಯ ರಕ್ಷಣೆಯ ಬಗ್ಗೆ ತಾವು ಪೂರ್ಣಾಸಕ್ತರಾಗಿ, ನಾಳಿನ ಪರಿಸ್ಥಿತಿಯನ್ನೆದುರಿಸಲು ಇಂದೇ ಸಿದ್ಧವಾಗಬೇಕು."

"ನಮ್ಮ ಪೂಜ್ಯ ತಂದೆಯವರಾದ ಶ್ರೀಶ್ರೀ ಪ್ರೌಢದೇವರಾಯರು ಮಲ್ಲಿಕಾರ್ಜುನರಾಯರಿಗೇ ಎಲ್ಲ ಅನುಕೂಲ್ಯಗಳನ್ನು ಒದಗಿಸಿ ಅವುಗಳಿಂದ ನಮ್ಮನ್ನು ವಂಚಿತರನ್ನಾಗಿ ಮಾಡಿದರು. ಆದರೆ ನಮ್ಮ ಬುದ್ಧಿಬಲ, ತೋಳ್ಬಲಗಳಿಂದ ನಾವು ಅವರನ್ನು ಮೀರಿಸಲು ನಿರ್ಧರಿಸಿದ್ದೇವೆ. ಸಾಮ್ರಾಜ್ಯದ

ಇತೋಪ್ಯತಿಶಯ ಅಭ್ಯುದಯ ಸಾಧಿಸಲು, ನೀವು ಈವರೆಗೆ ನಮಗೆ ನೆರ ವಾದಂತೆ, ಇನ್ನು ಮುಂದೆಯೂ ನೆರವಾಗಬೇಕು."

"ಇನ್ನು ಮುಂದೆ ನಾನು ಯಾವ ರೀತಿ ನೆರವು ನೀಡಬೇಕೆಂಬುದನ್ನು ತಾವೇ ಸ್ಪಷ್ಟಪಡಿಸಬೇಕು."

"ಮಹಾಪ್ರಧಾನಿ ಸ್ಥಾನಕ್ಕೆ ಯಾರನ್ನು ನಿಯಮಿಸೋಣ ?"

"ಯಾರನ್ನು ನಿಯಮಿಸಿದರೆ ತಮ್ಮ ಉದ್ದೇಶ ಸಾರ್ಥಕವಾಗುತ್ತದೆಯೋ ಅವರನ್ನೇ ನೇಮಿಸಿ."

"ನಿಮ್ಮನ್ನೇ..........."

"ನನಗೆ ಸ್ಥಾನಮಾನ ಬೇಕಿಲ್ಲ – ರಾಜಧಾನಿಯ ವ್ಯವಸ್ಥೆ ಅಚ್ಚುಕಟ್ಟಾದ ಕೂಡಲೆ ನಾನು ಚಂದ್ರಗಿರಿಗೆ ಹೋಗುತ್ತೇನೆ – ಅಲ್ಲಿ ಒಂದು ಅರಮನೆ ಯನ್ನು ಕಟ್ಟಿಸುತ್ತಿದ್ದೇನೆ. ಚಂದ್ರಗಿರಿಯನ್ನೇ ನನ್ನ ಕೇಂದ್ರಸ್ಥಾನವನ್ನಾಗಿಟ್ಟು ಕೊಂಡು ನರ್ಮದೆಯಿಂದ ಸೇತು ರಾಮೇಶ್ವರದವರೆಗಿರುವ ದಕ್ಷಿಣಾಪಥ ವನ್ನೆಲ್ಲಾ ಗೆದ್ದು ಮಹಾಸಾಮ್ರಾಜ್ಯಕ್ಕೆ ಒಪ್ಪಿಸಬೇಕೆಂದಿದ್ದೇನೆ ಇಡಿಯ ದಕ್ಷಿಣ ಭಾರತ ಏಕಚಕ್ರಾಧಿಪತ್ಯದ ಕೆಳಗೆ ಬಂದರೆ, ಬಹಮನಿಯರನ್ನೂ, ದಿಲ್ಲಿಯ ಸುಲ್ತಾನರನ್ನೂ ನಾವು ಸುಲಭವಾಗಿ ಎದುರಿಸಬಹುದು."

"ನೀವು ಮಹಾಪ್ರಧಾನಿಪೀಠ ಅಲಂಕರಿಸುವಿರೆಂದು ನಾವು ಭರವಸೆ ಯಿಟ್ಟುಕೊಂಡಿದ್ದೆವು."

"ನನ್ನನ್ನುಳಿದು ಈ ಸ್ಥಾನಕ್ಕೆ ಯಾರೂ ಅರ್ಹರಲ್ಲ ಎಂದು ಭಾವಿಸು ವುದು ಸಾಮ್ರಾಜ್ಯದ ಹಿರಿಮೆಗೆ ಅಗೌರವವಾಗುತ್ತದೆ."

"ಯಾರನ್ನು ನೇಮಿಸುವುದೆನ್ನುವುದರ ಬಗ್ಗೆ ನಾವು ನಿರ್ಧಾರ ಕೈಗೊಳ್ಳ ಲಾರದವನಾಗಿದ್ದೇವೆ. ನೀವೇ ಸೂಕ್ತ ಸಲಹೆಯನ್ನೀಯಬೇಕು."

ಕ್ಷಣಕಾಲ ವಿಚಾರಮಾಡಿದ ನರಸಿಂಹನಾಯಕರು,

"ವಿಜಯನಗರದ ಮಹಾಪ್ರಧಾನಿ ಮಹಾವೀರನೂ ಆಗಿರಬೇಕು. ವಿದ್ವತ್ಪಕ್ಷಪಾತಿಯೂ ಆಗಿರಬೇಕು. ಇದು ವಿಜಯನಗರವಾಗಿರುವಂತೆ ವಿದ್ಯಾ ನಗರವೂ ಆಗಿದೆ. ಎರಡು ದೃಷ್ಟಿಯಿಂದಲೂ ಸ್ವಯಂ ವೀರರೂ, 'ಭಾಷ್ಯ ಭೂಷಾ' ದರ್ಶನ ಗ್ರಂಥಕರ್ತರಾದ ಮಹಾಪಂಡಿತರೂ ಆದ ತಿಮ್ಮಣ್ಣದಣ್ಣಾ ಯಕರು ಸರ್ವವಿಧದಿಂದಲೂ ಈ ಸ್ಥಾನಕ್ಕೆ ಅರ್ಹರೆಂದು ನನ್ನ ಭಾವನೆ."

"ತಿಮ್ಮಣ್ಣ ದಣ್ಣಾಯಕರು ದಕ್ಷರೆನ್ನುವ ವಿಷಯ ನಿರ್ವಿವಾದ. ಆದರೆ ಅವರು ಮಲ್ಲಿಕಾರ್ಜುನರಾಯರ ಪಕ್ಷೀಯರೆಂಬುದನ್ನು ನೀವು ಮರೆತಂತೆ ಕಾಣುತ್ತದೆ."

"ಅವರು ವಿಜಯನಗರದ ಪಕ್ಷೀಯರು – ಮಲ್ಲಿಕಾರ್ಜುನರಾಯರು ಪ್ರಭು ಸ್ಥಾನದಲ್ಲಿದ್ದುದರಿಂದ ಅವರಿಗೆ ತ್ರಿಕರಣಪೂರ್ವಕ ಸೇವೆ ಸಲ್ಲಿಸಿದರು ಈಗ ತಾವು ಪ್ರಭುಪೀಠದಲ್ಲಿರುವುದರಿಂದ ತಮ್ಮ ಸೇವೆಯನ್ನು ಅದೇ ಭಕ್ತಿ, ನಿಷ್ಠೆಯಿಂದ ಕೈಗೊಳ್ಳುತ್ತಾರೆ"

"ಆಗಬಹುದು – ಚಂದ್ರಗಿರಿಗೆ ಹೋಗಿ ನೆಲಸುವ ತಮ್ಮ ನಿರ್ಧಾರ ವನ್ನು ಬದಲಿಸಲು ಸಾಧ್ಯವಿಲ್ಲವೇ?"

"ನಾನು ಬದಲಿಸದಿರುವುದೇ ಉಭಯತಾಪಿ ಕ್ಷೇಮ – ಈ ಸಂದರ್ಭ ದಲ್ಲಿ ನಾನು ಒಂದು ಅರಿಕೆ ಮಾಡಿಕೊಳ್ಳಬೇಕೆಂದಿದ್ದೇನೆ. ಮಹಾ ಪ್ರಭು ಗಳು ಅನ್ಯಥಾ ಭಾವಿಸಬಾರದು."

"ಇಲ್ಲ – ಹೇಳಿ."

"ವಿಜಯನಗರ ಸಾಮ್ರಾಜ್ಯದಲ್ಲಿ ವಿವಿಧ ಪಂಥಗಳಿಗೆ ಸೇರಿದ ಹಿಂದು ಗಳಿರುವುದಲ್ಲದೆ ಮುಸಲ್ಮಾನರೂ, ಕ್ರೈಸ್ತರೂ ಇದ್ದಾರೆ. ತಮ್ಮ ಹಿರಿಯರು ಧಾರ್ಮಿಕ ಸಮಭಾವನೆ ತಳೆದು ಎಲ್ಲ ಮತಗಳೂ ಅಬಾಧಿತವಾಗಿ ಬೆಳೆಯ ಲು ಅವಕಾಶಮಾಡಿಕೊಟ್ಟರು. ರಾಜಧಾನಿಯಲ್ಲಿರುವ ಹಲವು ಮಸೀದಿಗಳು, ಇಗರ್ಜಿಗಳು ವಿಶ್ವಕ್ಕೇ ಒಂದು ಉಜ್ವಲ ಸಂದೇಶವನ್ನು ನೀಡುತ್ತಿವೆ. ಈ ಉದಾತ್ತ ಧೋರಣೆ ನಮ್ಮ ಸಾಮ್ರಾಜ್ಯದ ವೈಶಿಷ್ಟ್ಯವೂ ಆಗಿದೆ, ಮಹಾ ಸಂಪತ್ತೂ ಆಗಿದೆ. ತಾವೂ ಇದನ್ನು ಬೆಳೆಸಿಕೊಂಡು ಬರಬೇಕು.

ಭಕ್ತನಾದವನೂ ಪ್ರಪತ್ತಿಮಾರ್ಗವನ್ನನುಸರಿಸಲಿ, ಅದ್ವೈತ ಮಾರ್ಗ ವನ್ನನುಸರಿಸಲಿ, ನೇರವಾಗಿ ಭಗವಂತನೊಂದಿಗೆ ಸಂಬಂಧ ಬೆಳಸಿಕೊಳ್ಳ ಬೇಕು. ಅರ್ಚಕರು, ಪುರೋಹಿತರು, ಗುರುಗಳು, ಪೂಜಾರಿಗಳು ಅಡ್ಡ ಗೋಡೆಯಂತೆ ಭಕ್ತ ಭಗವಂತರ ನಡುವೆ ನಿಲ್ಲಬೇಕಾಗಿಲ್ಲ. ಪುರೋಹಿತ, ಪೂಜಾರಿಗಳ ಕೈಗೊಂಬೆಯಾಗುವ ಧರ್ಮ, ಅಧರ್ಮವಾಗುತ್ತದೆ. ಭಗ ವಂತನ ಸೇವೆ ಕಪಟ ನಾಟಕವಾಗುತ್ತದೆ. ಪೂಜೆ, ಉತ್ಸವಗಳೆಲ್ಲಾ ನೇತ್ರ ಚಾಪಲ್ಯ ಪೂರೈಸುವ ಸಾಧನಗಳಾಗುತ್ತವೆ. ಭಗವಂತನನ್ನು ಗುತ್ತಿಗೆಗೆ

ತೆಗೆದುಕೊಂಡಿರುವೆವೆಂದು ಭಾವಿಸುವ ಪುರೋಹಿತ, ಪೂಜಾರಿಗಳು ಪ್ರಜಾಕಂಟಕರಾಗಿ, ಧರ್ಮದ ಧವಳಕೀರ್ತಿಯನ್ನು ಹೊಲಸು ಮಾಡುತ್ತಾರೆ. ಇದರಿಂದ ಜನರಲ್ಲಿ ಧರ್ಮಶ್ರದ್ಧೆ ಅಳಿವುದಲ್ಲದೆ, ಪರಸ್ಪರ ಅಸೂಯೆ, ದ್ವೇಷಕ್ಕೂ ಬುನಾದಿ ಹಾಕುತ್ತದೆ "

" ಯಾರನ್ನು ಉದ್ದೇಶಿಸಿ ನೀವು ಈ ಮಾತು ಆಡುತ್ತಿರುವಿರಿ ನಾಯಕರೇ ?"

" ತಿರುಪತಿಯ ಅರ್ಚಕರನ್ನು – ನಾನು ತಿರುವೆಂಕಟನಾಥನ ದಾಸಾನುದಾಸ ಎಂಬ ವಿಷಯ ಮಹಾಪ್ರಭುಗಳಿಗೆ ತಿಳಿದಿರಬಹುದು. ವೆಂಕಟಾದ್ರಿಯ ಮೇಲೆ ನಿಂತು ಸಹಸ್ರಾರು ವರ್ಷಗಳಿಂದ ಭಕ್ತಕೋಟಿಯನ್ನು ಉದ್ಧರಿಸುತ್ತಿರುವ ಆ ಸ್ವಾಮಿಯ ಉತ್ತುಂಗತುಂಗಾಕೃತಿಯನ್ನು ಕಂಡಕೂಡಲೆ ನನ್ನ ಮೈ ನವಿರೇಳುವುದು. ಕಣ್ಣುಗಳಿಂದ ಆನಂದಭಾಷ್ಪ ದ್ರವಿಸುವುದು. ಆದರೆ ಆ ನನ್ನ ಸ್ವಾಮಿಯೂ ಬಂದಿಯಾಗಿದ್ದಾನೆ. ನೀಚಪುರೋಹಿತರ ಕೈಗೆ ಸಿಕ್ಕಿ ತಿರುವೆಂಕಟನಾಥ ತನ್ನ ಮುಕ್ತಿಯ ಸುದಿನ ನಿರೀಕ್ಷಿಸುತ್ತಿದ್ದಾನೆ."

ನರಸಿಂಹನಾಯಕರ ಸಲಹೆ ಕೇಳಿದ ವಿರೂಪಾಕ್ಷರಾಯರ ಮನಸ್ಸಿಗೆ ಕಸಿವಿಸಿಯಾಯಿತು. ಅದನ್ನು ಹೊರತೋರದೆ ಹಸನ್ಮುಖರಾಗಿ,

" ವಯಸ್ಸಿನಲ್ಲಿ, ಅನುಭವದಲ್ಲಿ ಹಿರಿಯರಾದ ನಿಮ್ಮ ಮಾತನ್ನು ನಾವು, ಸದಾ ಲಕ್ಷ್ಯದಲ್ಲಿಟ್ಟುಕೊಂಡಿರುತ್ತೇವೆ "

ಎಂದು ಅಪ್ಪಣೆಕೊಡಿಸಿದರು.

## ೨

ತಿಮ್ಮಣ್ಣ ದಣ್ಣಾಯಕರು, ಮಹಾಪ್ರಧಾನಿ ಪೀಠ ಅಲಂಕರಿಸುವವರೆಗೆ ರಾಜಧಾನಿಯಲ್ಲಿದ್ದ ನರಸಿಂಹನಾಯಕರು ತಮ್ಮ ಪರಿವಾರದೊಂದಿಗೆ ಚಂದ್ರ ಗಿರಿಗೆ ಪ್ರಯಾಣ ಬೆಳೆಸಿದರು.

ಮಹಾಪ್ರಧಾನಿ ಪಟ್ಟಕ್ಕೇರಿದರೂ ತಿಮ್ಮಣ್ಣ ದಣ್ಣಾಯಕರು ತಮ್ಮ ನಿತ್ಯಾನುಷ್ಠಾನ, ಹರಿಸಂಕೀರ್ತನ, ಪೂಜಾದಿಗಳನ್ನು ಬಿಡಲಿಲ್ಲ.

ಪರಮ ತೇಜಸ್ವಿಯಾಗಿದ್ದ ಆ ಮಹಾಬ್ರಾಹ್ಮಣ, ತ್ರಿನಾಮ ಧರಿಸಿ, ಪೂಜೆ ಮುಗಿಸಿಕೊಂಡು ಹೊರಬಂದಿತೆಂದರೆ ಭಗವಾನ್ ಶ್ರೀ ರಾಮಾನುಜ ಯತಿರಾಜರೇ ಬಂದಂತಾಗುತ್ತಿತ್ತು. ದಣ್ಣಾಯಕರ ಧರ್ಮಪತ್ನಿ ರಂಗಾಂಬಿಕೆ, ಅನುಕೂಲ ಸತಿಯಾಗಿ ಪತಿಯ ಸಕಲ ಪೂಜಾದಿ ಕರ್ಮಗಳಲ್ಲಿಯೂ ಭಾಗ ವಹಿಸುತ್ತಿದ್ದಳು.

ಶ್ರೀಮಂತಿಕೆಯ ಆಡಂಬರವಿಲ್ಲದ ಸಾಧಾರಣ ಗೃಹದಲ್ಲಿಯೇ ದಣ್ಣಾ ಯಕರ ವಾಸ. ನಾಲ್ಕು ಕಂಬದ ತೊಟ್ಟಿಯ ಮನೆ ದೀನಾನಾಥರ ನಿಜ ಧಾಮವಾಗಿತ್ತು. ಭಗವತ್ಪ್ರಸಾದ ಸ್ವೀಕರಿಸುವ ಮುನ್ನ ದಣ್ಣಾಯಕರು, ಭಿಕ್ಷುಕರನ್ನೆಲ್ಲಾ ತೃಪ್ತಿಪಡಿಸಿ, ಶೇಷಪ್ರಸಾದವನ್ನು ಸ್ವೀಕರಿಸುತ್ತಿದ್ದರು. ಗಂಡನ ಎಲೆಯಲ್ಲಿ ಮಿಕ್ಕಿದ್ದುದಷ್ಟೇ ರಂಗಮ್ಮನ ಪಾಲಿನದು.

ಒಂದು ದಿನ ದಣ್ಣಾಯಕರು ಪ್ರಾತಃ ಸಂಧ್ಯಾ ಪೂಜೆ ಮುಗಿಸಿಕೊಂಡು, ಲಕ್ಷ್ಮೀಸ್ತೋತ್ರ ಹೇಳಿಕೊಂಡು ಹೊರಗೆ ಬಂದರು

"ನಿತ್ಯೈವೈಷಾ ಜಗನ್ಮಾತಾ ವಿಷ್ಣೋಃ ಶ್ರೀರನಪಾಯಿನೀ
ಯಥಾ ಸರ್ವಗತೋ ವಿಷ್ಣುಸ್ತಥೈವೇಯಂ ದ್ವಿಜೋತ್ತಮ ॥೧॥

---

೧. ವಿಷ್ಣುವಿನಿಂದ ಎಂದಿಗೂ ಬೇರೆಯಾಗಿರದ ಜಗನ್ಮಾತೆಯಾದ ಲಕ್ಷ್ಮೀದೇವಿಯು ನಿತ್ಯಳು ; ವಿಷ್ಣುವಿನಂತೆಯೇ ಇವಳೂ ಸರ್ವಗತಳು.

ಅರ್ಥೋ ವಿಷ್ಣುರಿಯಂ ವಾಣೀ ನೀತಿರೇಷಾ ನಯೋ ಹರಿಃ
ಬೋಧೋ ವಿಷ್ಣುರಿಯಂ ಬುದ್ಧಿಃ ಧರ್ಮೋಽಸೌ ಸತ್ಕ್ರಿಯಾ
ತ್ವಿಯಮ್ ||೨||
ಸ್ರಷ್ಟಾ ವಿಷ್ಣುರಿಯಂ ಸೃಷ್ಟಿಃ ಶ್ರೀರ್ಭೂಮಿಃ ಭೂಧರೋ ಹರಿಃ
ಸಂತೋಷೋ ಭಗವಾನ್ ಲಕ್ಷ್ಮೀಃ ತುಷ್ಟಿರ್ಮೈತ್ರೇಯ ಶಾಶ್ವತೀ ||೩||
ಶಂಕರೋ ಭಗವಾನ್ ವಿಷ್ಣುಃ ಗೌರೀ ಲಕ್ಷ್ಮೀರ್ದ್ವಿಜೋತ್ತಮ
ಮೈತ್ರೇಯ ಕೇಶವಃ ಸೂರ್ಯಃ ತತ್ಪ್ರಭಾ ಕಮಲಾಲಯಾ ||೪||
ಶಶಾಂಕಃ ಶ್ರೀಧರಃ ಕಾಂತಿಃ ಶ್ರೀಃ ತಸ್ಯೈವಾನಪಾಯಿನೀ
ಧೃತಿರ್ಲಕ್ಷ್ಮೀಃ ಜಗಚ್ಚೇಷ್ಟಾ ವಾಯುಃ ಸರ್ವತ್ರಗೋ ಹರಿಃ ||೫||
ಜ್ಯೋತ್ಸ್ನಾ ಲಕ್ಷ್ಮೀಃ ಪ್ರದೀಪೋಽಸೌ ಸರ್ವಂ ಸರ್ವೇಶ್ವರೋಹರಿಃ
ಲತಾಭೂತಾ ಜಗನ್ಮಾತಾ ಶ್ರೀರ್ವಿಷ್ಣುಃ ದ್ರುಮಸಂಸ್ಥಿತಿಃ ||೬||
ವಿಭಾವರೀ ಶ್ರೀರ್ದಿವಸೋ ದೇವಶ್ಚಕ್ರಗದಾಧರಃ
ವರಪ್ರದೋ ವರೋ ವಿಷ್ಣುಂ ವಧೂಃ ಪದ್ಮವನಾಲಯಾ ||೭||

---

೨. ವಿಷ್ಣುವು ಅರ್ಥಸ್ವರೂಪನು, ಲಕ್ಷ್ಮಿಯು ವಾಣಿಯು; ಹರಿಯು ನ್ಯಾಯ ಸ್ವರೂಪನು, ಇವಳು ನೀತಿಯು: ವಿಷ್ಣುವು ಜ್ಞಾನ ಸ್ವರೂಪನು, ಇವಳು ಬುದ್ಧಿಯು; ಅವನು ಧರ್ಮ ಸ್ವರೂಪನು, ಇವಳು ಸತ್ಕ್ರಿಯೆಯು.

೩. ವಿಷ್ಣುವು ಸೃಷ್ಟಿಕರ್ತನು, ಇವಳು ಸೃಷ್ಟಿಯು; ಹರಿಯು ಭೂಧರನು, ಇವಳು ಭೂಮಿಯು; ಭಗವಂತನು ಸಂತೋಷ ಸ್ವರೂಪನು, ಲಕ್ಷ್ಮಿಯು ಶಾಶ್ವತ ವಾದ ತುಷ್ಟಿಯು.

೪. ಭಗವಂತನಾದ ವಿಷ್ಣುವು ಶಂಕರನು, ಲಕ್ಷ್ಮಿಯೇ ಗೌರೀದೇವಿಯು; ಕೇಶವನು ಸೂರ್ಯನು, ಕಮಲಾದೇವಿಯು ಅವನ ಪ್ರಭೆಯು.

೫. ಶ್ರೀಧರನು ಚಂದ್ರನು, ಅವನೊಂದಿಗೆ ಯಾವಾಗಲೂ ಸೇರಿರುವ ಶ್ರೀದೇವಿಯು ಚಂದ್ರನ ಕಾಂತಿಯು; ಸರ್ವಗತನಾದ ಹರಿಯು ವಾಯುವು, ಲಕ್ಷ್ಮಿಯು ಜಗತ್ತಿನ ಕ್ರಿಯಾಶಕ್ತಿ ಮತ್ತು ಧೃತಿ.

೬. ಸರ್ವೇಶ್ವರನಾದ ಹರಿಯು ಪ್ರದೀಪಸ್ವರೂಪನು, ಲಕ್ಷ್ಮಿಯು ಪ್ರಭಾಸ್ವರೂಪಳು; ವಿಷ್ಣುವು ವೃಕ್ಷಸ್ವರೂಪನು, ಜಗನ್ಮಾತೆಯಾದ ಶ್ರೀದೇವಿಯು ಲತಾ ಸ್ವರೂಪಳು.

೭. ಚಕ್ರಗದಾಧರನಾದ ವಿಷ್ಣುವು ದಿವಸಸ್ವರೂಪನು, ಶ್ರೀದೇವಿಯು ರಾತ್ರಿ ಸ್ವರೂಪಳು; ವರಪ್ರದನಾದ ವಿಷ್ಣುವು ವರನು, ಪದ್ಮವನಾಲಯಳಾದ ಲಕ್ಷ್ಮಿಯು ವಧುವು.

ನದಸ್ವರೂಪೀ ಭಗವಾನ್ ಶ್ರೀರ್ನದೀರೂಪ – ಸಂಸ್ಥಿತಾ
ಧ್ವಜಶ್ಚ ಪುಂಡರೀಕಾಕ್ಷಃ ಪತಾಕಾ ಕಮಲಾಲಯಾ ||೮||
ತೃಷ್ಣಾ ಲಕ್ಷ್ಮೀಃ ಜಗತ್ಸ್ವಾಮೀ ಲೋಭೋ ನಾರಾಯಣಃ ಪರಃ
ರತೀ ರಾಗಶ್ಚ ಧರ್ಮಜ್ಞ ಲಕ್ಷ್ಮೀರ್ಗೋವಿಂದ ಏವ ಚ ||೯||
ದೇವ ತಿರ್ಯಙ್ಮನುಷ್ಯೇಷು ಪುಂನಾಮಾ ಭಗವಾನ್ ಹರಿಃ
ಸ್ತ್ರೀನಾಮ್ನಿ ಶ್ರೀಶ್ಚ ವಿಜ್ಞೇಯಾ ನಾನಯೋರ್ವಿದ್ಯತೇ ಪರಮ್ ||೧೦||

ಪ್ರತಿನಾರಾಯಣನಂತೆ ಕಾಣುತ್ತಿದ್ದ ಪತಿಯ ಪಾದದ್ವಯಗಳಿಗೆ ರಂಗಾಂಬಿಕೆ ಮಣಿದು, ಪಾದಧೂಳಿಯನ್ನು ಮುಡಿದು ಎದ್ದು ನಿಂತಳು.

ದಣ್ಣಾಯಕರು ಕ್ಷಣಕಾಲ ಕಣ್ಣು ಮುಚ್ಚಿ

" ನಾರಾಯಣ – ನಾರಾಯಣ " ಎಂದರು.

ರಂಗಾಂಬಿಕೆ ಅನುನಯದಿಂದ,

" ಅರಮನೆಯಿಂದ ಕುಚೇಲನಾಯಕರು ಬಂದಿದ್ದರು " ಎಂದಳು.

" ಏನು ಸಮಾಚಾರ – ಮಹಾಪ್ರಭುಗಳು ಕರೆಕಳಿಸಿದ್ದರೆ ?"

" ಇಲ್ಲ – ಮಹಾಪ್ರಧಾನಿ ಮಹಲಿಗೆ ನೀವು ಹೋಗಬೇಕೆಂದು ಪ್ರಭುಗಳು ಬಯಸುತ್ತಿದ್ದಾರಂತೆ !"

" ಬಡಬ್ರಾಹ್ಮಣ ಇಂದು ಮಹಾಸಾಮ್ರಾಜ್ಯದ ಪ್ರಧಾನಿಯಾಗಿದ್ದಾನೆ – ಇನ್ನು ಮುಂದೆ ನಾನು ಬ್ರಾಹ್ಮಣನಾಗಿರಬೇಕೋ, ಪ್ರಧಾನಿಯಾಗಿರಬೇಕೋ ಎನ್ನುವ ಪ್ರಶ್ನೆ ಮುಂದೆ ಬಂದು ನಿಂತಿದೆ – ಮಹಾ

---

೮. ಭಗವಂತನು ನದ – ಸ್ವರೂಪನು, ಶ್ರೀದೇವಿಯು ನದೀರೂಪಳು; ಪುಂಡರೀಕಾಕ್ಷನಾದ ವಿಷ್ಣುವು ಧ್ವಜರೂಪನು ; ಕಮಲದಲ್ಲಿರುವ ಲಕ್ಷ್ಮೀಯು ಪತಾಕಾ ರೂಪಳು.

೯. ಜಗತ್ಸ್ವಾಮಿಯಾದ ನಾರಾಯಣನು ಲೋಭಸ್ವರೂಪನು, ಲಕ್ಷ್ಮೀಯು ತೃಷ್ಣಾ ಸ್ವರೂಪಳು ; ಗೋವಿಂದನು ರಾಗಸ್ವರೂಪನು, ಲಕ್ಷ್ಮೀಯು ರತಿ ಸ್ವರೂಪಳು.

೧೦. ದೇವತೆಗಳು, ತಿರ್ಯಗ್ಯೋನಿಗಳು ಮನುಷ್ಯರು – ಇವರಲ್ಲಿ ಪುರುಷವಾಚಕವಾದುದೆಲ್ಲಾ ಭಗವಂತನಾದ ಹರಿಯು, ಸ್ತ್ರೀವಾಚಕವಾದುದೆಲ್ಲಾ ಲಕ್ಷ್ಮೀ ಎಂದು ತಿಳಿಯಬೇಕು ; ಇವರಿಬ್ಬರಿಗಿಂತ ಬೇರೆಯಾವುದೂ ಇಲ್ಲ.

ವಿಷ್ಣುಪುರಾಣ.

ಪ್ರಧಾನಿ ಮಹಲಿನಲ್ಲಿ ವಾಸಮಾಡಬೇಕೆಂದು ನೀನಿಚ್ಛಿಸುವೆಯಾ ರಂಗಾ" ?

"ಸ್ವಾಮಿ – ತಾವೆಲ್ಲಿರುವಿರೋ ಅದೇ ನನಗೆ ಮಹಾಪ್ರಧಾನಿ ಮಹಲು – ಭೂವೈಕುಂಠ. ನನ್ನ ಪೂಜ್ಯ ಮಾವಂದಿರಾದ ಸಿಂಗಣ್ಣನವರೂ, ಅತ್ತೆಯವರಾದ ಸೀತಾಂಬಿಕೆಯವರೂ ಇದೇ ಗೃಹದಲ್ಲಿ ಅಲ್ಲವೇ ವಾಸವಾಗಿದ್ದುದು. ಅವರ ಸತ್ವಗುಣದಿಂದ ಪವಿತ್ರಗೊಂಡಿರುವ ಈ ಮನೆ ನನ್ನ ಭಾಗಕ್ಕೆ ಮನೆಯಲ್ಲ – ದೇವಮಂದಿರ. – ಮಹಾ ಪ್ರಧಾನಿಗಳಿರುವೆಡೆಯೇ ಮಹಾಪ್ರಧಾನಿ ಮಹಲಾಗುತ್ತದೆ – ಅದಕ್ಕಾಗಿ ಅವರೊಂದು ಅರಮನೆಯಲ್ಲಿ ವಾಸಿಸಬೇಕಾದದ್ದಿಲ್ಲ ಎಂದು ನಾನು ಕುಚೇಲ ನಾಯಕರಿಗೆ ತಿಳಿಸಿದೆ. ಅದಕ್ಕವರು ಸಾಮ್ರಾಜ್ಯದ ಮಹಾಪ್ರಧಾನಿಗಳು, ಸಾಮಾನ್ಯರಂತೆ ಬಾಳ್ವೆ ಮಾಡುವುದು ಸಾಮ್ರಾಜ್ಯದ ಯೋಗ್ಯತೆಗೆ ತಕ್ಕುದಲ್ಲ – ನೀವು ಹೇಗಾದರೂ ಮಹಾಪ್ರಧಾನಿಗಳನ್ನೊಪ್ಪಿಸಬೇಕು ' ಎಂದು ಹೇಳಿ ಹೋದರು."

"ನಿನ್ನ ಅಭಿಮತವೇನು ರಂಗಾ ?"

"ನನ್ನ ಅಭಿಮತ ಆಗಲೇ ಅರಿಕೆ ಮಾಡಿಕೊಂಡಿದ್ದೇನೆ – ಪ್ರಭುಗಳ ಇಚ್ಛೆಯಂತೆ ನಾವು ಮಹಾಪ್ರಧಾನಿ ಮಹಲಿಗೆ ಹೋಗಬೇಕಾಗಿ ಬಂದರೆ, ಅದಕ್ಕೂ ಸಿದ್ಧಳಾಗಿದ್ದೇನೆ."

"ನಾನೆಲ್ಲಿಗೂ ಹೋಗುವುದಿಲ್ಲ – ಇದೇ ನನ್ನ ಅರಮನೆ. ಪ್ರಭುಗಳಿಗೆ ಅರಿಕೆಮಾಡಿಕೊಂಡು, ಇಲ್ಲಿಯೇ ವಾಸಿಸಲು ಅಪ್ಪಣೆ ಪಡೆಯುತ್ತೇನೆ."

"ಈಗ ನನ್ನ ಮನಸ್ಸಿಗೆ ನೆಮ್ಮದಿಯಾಯಿತು. – ಸ್ವಾಮೀ, ಬಹಳ ದಿನಗಳ ನನ್ನ ಆಸೆಯೊಂದು ಅಪೂರ್ಣವಾಗಿಯೇ ಉಳಿದಿದೆ."

"ಮೇಲುಕೋಟೆಗೆ ಹೋಗುವ ವಿಷಯವಲ್ಲವೇ ?"

"ಹೌದು."

"ಯದುಗಿರಿ ಶ್ರೀ ಚೆಲುವನಾರಾಯಣನ ಪಾದಗಳಿಗೆ ಅಭಿವಂದಿಸಲು ನನ್ನ ಮನಸ್ಸು ಅಷ್ಟೇ ಕಾತರಿಸುತ್ತಿದೆ ರಂಗಾ. ಸ್ವಲ್ಪಕಾಲ ನಾವು ಈ ಮಾತೆತ್ತುವಂತಿಲ್ಲ. ಶ್ರೀವಿರೂಪಾಕ್ಷರಾಯರು ಇದೇ ಸಿಂಹಾಸನಾರೋಹಣ ಮಾಡಿದ್ದಾರೆ. ಸ್ವಲ್ಪ ಕಾಲಾನಂತರ ನಾನು ಈ ವಿಷಯ ಅವರಲ್ಲಿ ಪ್ರಸ್ತಾಪಿಸಿ, ಅವರ ಅನುಮತಿ ಪಡೆಯುತ್ತೇನೆ. ಯದುಗಿರಿನಾಥನಿಗೆ ಮನದಣಿಯ ಸೇವೆ ಸಲ್ಲಿಸುವೆಯಂತೆ ಸುಮ್ಮನಿರು"

ಎಂದು ರಂಗಮ್ಮನನ್ನು ಸಮಾಧಾನಗೊಳಿಸಿದರು.

೪

ಸಿಂಹಾಸನವನ್ನಲಂಕರಿಸಿ, ವಿಜಯನಗರ ಮಹಾಸಾಮ್ರಾಜ್ಯದ ಅಭಿಷಿಕ್ತ ಪ್ರಭುಗಳೆಂದು ಕರೆಸಿಕೊಳ್ಳಲು ಕಾತರರಾಗಿದ್ದ ವಿರೂಪಾಕ್ಷರಾಯರು ಅದರ ಉತ್ತರವಾದಿತನ, ಸಂಕಷ್ಟಗಳ ಅರಿವಾದ ಮೇಲೆ ಭಯಗ್ರಸ್ತರಾದರು. ಪ್ರಬಲರಾದ ಮಂತ್ರಿ, ಸಾಮಂತರು, ನಾಗರಿಕರ ಒಲವು ತಮ್ಮಕಡೆಗಿಲ್ಲ ವೆಂಬುದು ಅವರಿಗೆ ಸ್ಪಷ್ಟವಾಗಿ ತಿಳಿದಿತ್ತು.

ವಜ್ರಖಚಿತವಾದ ಸ್ವರ್ಣಕಿರೀಟ ಅವರ ಪಾಲಿಗೆ ಮುಳ್ಳು ಕಿರೀಟ ವಾಯಿತು.

ಹಂಸತೂಲಿಕಾತಲ್ಪ ಶರಶಯ್ಯೆಯಾಯಿತು.

ನಿಯೋಜಿತ ಕಾರ್ಯಗಳಲ್ಲಿ ಲೇಶಮಾತ್ರವಾದ ಕುಂದೂಬರದಂತೆ ನಿರ್ವಹಿಸುತ್ತಿದ್ದ ತಿಮ್ಮಣ್ಣದಣ್ಣಾಯಕರು, ಅರಮನೆಯ ರಾಜಕೀಯದಲ್ಲಾಗಲಿ, ರಾಜಧಾನಿಯ ಪಕ್ಷ ವಿಪಕ್ಷಗಳ ಹೋರಾಟದಲ್ಲಿಯಾಗಲಿ ಕೈಹಾಕುತ್ತಿರಲಿಲ್ಲ. ಭಗವದ್‌ – ಕೈಂಕರ್ಯಕ್ಕೆ ತನುಮನಧನವನ್ನರ್ಪಿಸಿದ್ದ ದಣ್ಣಾಯಕರು, ವಿಧಿತ ಕಾರ್ಯಗಳಿಂದ ಬಿಡುವು ದೊರೆತೊಡನೆಯೇ ಪೂಜಾಮಂದಿರ ಸೇರಿ ಭಗವನ್ನಾಮಸ್ಮರಣೆಯಲ್ಲಿ ಲೀನವಾಗುತ್ತಿದ್ದರು.

'ಈ ಸನ್ಯಾಸಿಗೆ ಪ್ರಧಾನ ಮಂತ್ರಿತ್ವ ವಹಿಸಿದುದು ಸರಿಯಾಯಿತೇ?' ಎಂದು ವಿರೂಪಾಕ್ಷರಾಯರು ಯೋಚಿಸಲಾರಂಭಿಸಿದರು.

ಭಟ್ಕಳದ ಮುಸಲ್ಮಾನ ವ್ಯಾಪಾರಿಗಳೊಂದಿಗೆ ವ್ಯವಹಾರ ಮಾಡಿದ್ದ ವಿರೂಪಾಕ್ಷರಾಯರು ಹತ್ತು ಸಾವಿರ ಕುದುರೆಗಳಿಗಾಗಿ, ಮುಂಗಡ ಎರಡು ಲಕ್ಷ ವರಾಹ* ಗಳನ್ನಿತ್ತಿದ್ದರು. ಭಟ್ಕಳದ ವರ್ತಕರು ಕುದುರೆಗಳನ್ನೂ ಕಳಿಸಿರಲಿಲ್ಲ; ಮುಂಗಡವಾಗಿ ತೆಗೆದುಕೊಂಡಿದ್ದ ಹಣವನ್ನೂ ಹಿಂದಿರುಗಿಸಿರಲಿಲ್ಲ. ಹಣದ ಗತಿಯೇನು ಎಂದು ವಿರೂಪಾಕ್ಷರಾಯರು ಚಿಂತಿಸಲಾರಂಭಿಸಿದರು.

---

* ಸುಮಾರು ಎಳುವರೆ ರೂಪಾಯಿಗಳು.

ಇತ್ತ ಬಹಮನಿಯಲ್ಲಿ ಸುಲ್ತಾನ ನಿಜಾಂಷಹ ಮೃತಿಹೊಂದಲು, ಅವನ ಮಗ ಮಹಮದ್ ಗಾದಿಯನ್ನೇರಿದ್ದ. ಬಹಮನಿಯ ಅರಸೊತ್ತಿಗೆ ವಹಿಸಿಕೊಂಡವರು ವಿಜಯನಗರಕ್ಕೆ ಮುತ್ತಿಗೆ ಹಾಕುವ ಸಂಪ್ರದಾಯವನ್ನೇ ಬೆಳೆಸಿಕೊಂಡು ಬಂದಿದ್ದರು. ಮಹಮದ್ ಎಲ್ಲಿ ಬಂದು ಮೇಲೆ ಬೀಳುವನೋ ಎಂಬ ಭಯ ಬೇರೆ ವಿರೂಪಾಕ್ಷರಾಯರನ್ನು ಆವರಿಸಿತು.

ಚಂದ್ರಗಿರಿಯಿಂದ ಬರುತ್ತಿದ್ದ ಸುದ್ದಿಗಳೂ ಉತ್ತೇಜಕವಾಗಿರಲಿಲ್ಲ.

ಚಂದ್ರಗಿರಿ ಅರಮನೆಯ ರಚನೆ ಪೂರೈಸಲು, ನರಸಿಂಹನಾಯಕರು ಅಲ್ಲಿಯೇ ವಾಸಿಸಲಾರಂಭಿಸಿದ್ದರು. ಅವರೇ ಒಂದು ಪ್ರತ್ಯೇಕ ಸಾಮ್ರಾಜ್ಯ ಕಟ್ಟುತ್ತಿದ್ದಾರೆಯೋ ಎನ್ನುವಂತೆ ಚಂದ್ರಗಿರಿಯಲ್ಲಿ ರಾಜವೈಭವ ಮೆರೆದಿತ್ತು. ಕೊಡುಗೈಯೊಡೆಯರಾಗಿದ್ದ ನರಸಿಂಹನಾಯಕರು, ಕವಿ, ಕಲಾವಿದರ ಆಶ್ರಯದಾತರಾಗಿ ಎಲ್ಲರ ಪ್ರೇಮ. ಗೌರವಗಳಿಗೆ ಪಾತ್ರರಾಗಿದ್ದರು. ತೆಲುಗಿನ ಶ್ರೇಷ್ಠ ಕವಿಗಳಾದ ನಂದಿ ಮಲ್ಲಯ್ಯ, ಘಂಟಾ ಸಿಂಗಯ್ಯ ತಾವು ರಚಿಸಿದ 'ವರಾಹ ಪುರಾಣಮು' ಗ್ರಂಥವನ್ನು ನಾಯಕರಿಗೆ ಅರ್ಪಿಸಿ, ಅವರಿಂದ ಪುರಸ್ಕೃತರಾಗಿದ್ದರು.

ಸಾಳುವ (ಎಂದರೆ ಡೇಗೆ) ನರಸಿಂಹನಾಯಕರ ಮುತ್ತಜ್ಜನಾದ ಮಂಗುವಿಗೆ 'ಪರಪಕ್ಷಿ ಸಾಳುವ' ಎಂಬ ಬಿರುದಿದ್ದುದರಿಂದ ಈ ವಂಶಕ್ಕೆ ಸಾಳುವ ವಂಶವೆಂಬ ಹೆಸರು ಬಂದಿತೆಂದು ಪ್ರತೀತಿ. ಪುರಾಣಗಳಲ್ಲಿ ನಿರ್ದೇಶಿಸಲ್ಪಟ್ಟಿರುವ ಐವತ್ತಾರು ಕುಲಗಳಲ್ಲಿ ಸಾಳುವ ಕುಲವೂ ಒಂದು. ವೈಯ್ಯಾಕರಣಿ ಪಾಣಿನಿಯೂ ಸಾಳುವ ಹೆಸರನ್ನು ತನ್ನ ಗ್ರಂಥದಲ್ಲಿ ಕಾಣಿಸಿದ್ದಾನೆ. ನರಸಿಂಹನಾಯಕರ ಪೂರ್ವಜರೆಲ್ಲಾ ಶೈವರು. ನರಸಿಂಹನಾಯಕರೂ ಶೈವ ಸಂಪ್ರದಾಯದಲ್ಲಿ ಭಕ್ತಿ ತಳೆದು 'ಶಿವರಾತ್ರಿ'ಯನ್ನು ಪರಮಗೌರವದಿಂದ ಆಚರಿಸುತ್ತಿದ್ದರು. ಆದರೆ ವೈಷ್ಣವ ಧರ್ಮ ನರಸಿಂಹನಾಯಕರ ಮನಸ್ಸಿನ ಮೇಲೆ ಹೆಚ್ಚಿನ ಪರಿಣಾಮವನ್ನುಂಟುಮಾಡಿತ್ತು.

ಚಂದ್ರವಂಶೀಯರೆಂದು ಹೇಳಿಕೊಳ್ಳುವ ಸಾಳುವರು ದಕ್ಷಿಣಕನ್ನಡ ಜಿಲ್ಲೆಯಿಂದ ಬಂದವರು.

ನರಸಿಂಹನಾಯಕರ ಪೂರ್ವಜನಾದ ಸಾಳುವ ತಿಕ್ಕಮ ಸೇವುಣ ದೊರೆಗಳಾದ ಮಹಾದೇವ, ರಾಮಚಂದ್ರರ ದಣ್ಣಾಯಕನಾಗಿದ್ದು ೧೨೭೯

೧೨೮೦ರಲ್ಲಿ ದ್ವಾರಸಮುದ್ರವನ್ನು ಮುತ್ತಿ ದೋಚಿದ ಅನನು ಹರಿ ಹರದ ಹರಿಹರೇಶ್ವರ ದೇವಾಲಯದ ಜೀರ್ಣೋದ್ಧಾರ ಮಾಡಿ, ಅಗ್ರಹಾರ ದಿಂದ ಬರಬೇಕಾಗಿದ್ದ ಕಂದಾಯದ ಬಾಕಿಯನ್ನು ಕ್ಷಮಿಸಿದಂತೆ ಉಲ್ಲೇಖವಿದೆ.

ಸಂಗೀತ ಪಟ್ಟಣದಲ್ಲಿ ಸಾಳುವರ ಇನ್ನೊಂದು ಬಳ್ಳಿ ಪಸರಿಸಿತ್ತು. ಕೊಟ್ಟ ಕುಂಡ ಕಾಳಗದಲ್ಲಿ ಮಡಿದ ತಲಕಾಡಿನ ರಾಜಪ್ರತಿನಿಧಿ ಸಾಳುವ ರಾಮದೇವ, ಸಂಗೀತ ಪಟ್ಟಣದ ವಂಶಕ್ಕೆ ಸೇರಿದವನೆಂದು ಇತಿಹಾಸಕಾರರು ಊಹಿಸು ತ್ತಾರೆ. ಸಂಗೀತಪಟ್ಟಣದ ಸಾಳುವರು ಜೈನರು. ಸಂಗೀತಪಟ್ಟಣದ ಸಾಳು ವರಿಗೂ, ನರಸಿಂಹನಾಯಕನ ಪೂರ್ವಜರಿಗೂ ಇದ್ದ ಭೇದ ತೋರಿಸಲು ಇವರನ್ನು ಸಾಳುವ – ಗುಂಡರೆಂದು ಕರೆಯುವ ಪರಿಪಾಠವಿದೆ.

ಸಾಳುವ ಮಂಗುವಿನ ತಂದೆಯಾದ ಗುಂಡರಾಜ ಕಲ್ಯಾಣದ ದೊರೆ ಯಾಗಿದ್ದುಕೊಂಡು ರಾಮದುರ್ಗವನ್ನು ಕೈವಶಪಡಿಸಿಕೊಂಡ. ಗುಂಡನ ಮಕ್ಕಳೇ ಮಂಗು ಇಮ್ಮಡಿ ಗುಂಡ; ಇಮ್ಮಡಿ ಗುಂಡನ ಮಕ್ಕಳೇ ಮುಮ್ಮಡಿ ಗುಂಡ, ತಿಪ್ಪರಾಜ. ಪ್ರೌಢದೇವರಾಯರ ಏಕಮಾತ್ರ ಪುತ್ರಿಯಾದ ಹರಿ ಯಮ್ಮನನ್ನು ಲಗ್ನವಾಗಿದ್ದನು ಇದೇ ತಿಪ್ಪರಾಜ. ಇವರ ಮಗ ಗೋಪ ಅಥವಾ ಗೊಪ್ಪ. ಮುಮ್ಮಡಿ ಗುಂಡನ ಮಕ್ಕಳೇ ತಿಮ್ಮ, ನರಸಿಂಹ. ನರಸಿಂಹನಾಯಕರು ವಿರೂಪಾಕ್ಷರಾಯರಿಗೆ ದೂರದ ಸಂಬಂಧಿಯಾಗಿದ್ದರು.

ಸಾಳುವ ಮಂಗು ಪ್ರಸಿದ್ಧವೀರನಾಗಿದ್ದ. ತಾಮ್ರ ಶಾಸನವೊಂದು ಅವನ ವೀರಕೃತ್ಯಗಳನ್ನು ಚಿತ್ರವತ್ತಾಗಿ ಬಣ್ಣಿಸುತ್ತದೆ.

" ಇವರಲ್ಲಿ ಅತ್ಯಂತ ಪ್ರಸಿದ್ಧನೆಂದರೆ ಸಾಳುವ ಮಂಗಿದೇವ. ಹೂಗಳಿಗೆ ವಸಂತಕಾಲವು ಪ್ರಿಯವಾದಂತೆ, ಇವನ ಗುಣಗಾಂಭೀರ್ಯ ವಿಭುದರಿಗೆ ಪ್ರಿಯವಾಗಿತ್ತು.

ಒಬ್ಬ ಮಹಾವೀರನೊಂದಿಗೆ ಮಲ್ಲಯುದ್ಧ ಮಾಡುತ್ತಿದ್ದಾಗ ಮಂಗಿದೇವ ಅವನ ಕೈಯಲ್ಲಿದ್ದ ಕಠಾರಿಯನ್ನು ಕಸುಗೊಂಡ. ಆದ್ದರಿಂದಲೇ ಇವನಿಗೆ ಕಠಾರಿ ಸಾಳುವ ಎಂಬ ಹೆಸರು ಬಂದಿತು.

ತನ್ನ ತುತ್ತೂರಿಯನ್ನು ಶತ್ರುಕೋಟೆಯೊಳಗೆಸೆದು, ಅದನ್ನು ಕೈವಶ ಪಡಿಸಿಕೊಂಡ ಮೇಲೆ ತುತ್ತೂರಿಯನ್ನೆತ್ತಿಕೊಂಡವನೇ ಇವನು.

ಒಬ್ಬ ಸುಲ್ತಾನನನ್ನು ಮೂಲೋತ್ಪಾಟನಗೊಳಿಸಿ, ದಕ್ಷಿಣ ಭಾರತಕ್ಕೆ ನವಚೈತನ್ಯ ತುಂಬಿದವನೇ ಇವನು.

ಶ್ರೀರಂಗರಕ್ಷಕನೆಂದು ಖ್ಯಾತನಾದ ಇವನು, ಮಹಮದೀಯರಿಂದ ಆ ಪುಣ್ಯಕ್ಷೇತ್ರವನ್ನು ವಶಪಡಿಸಿಕೊಂಡು, ಶ್ರೀರಂಗವನ್ನೇ ತನ್ನ ನಿಜಧಾಮ ಮಾಡಿಕೊಂಡ.

ಸಾವಿರಾರು ಸಾಲಿಗ್ರಾಮಗಳನ್ನು ವಶಪಡಿಸಿಕೊಂಡು, ವಿಬುಧರಿಗೆ ಬಗೆ ಬಗೆಯ ಉಪಟಳಕೊಡುತ್ತಿದ್ದ ದಕ್ಷಿಣದ ಸುಲ್ತಾನನನ್ನು ಸದೆಬಡಿದು, ಅವನ ಪರಿವಾರ ಎಂಟನೆಯ ಮನೆಯ ಶ್ರುತಿಯಲ್ಲಿ ' ರಾಮ ರಾಮ ' ಎಂದು ಚೀತ್ಕರಿಸುವಂತೆ ಮಾಡಿದವನೇ ಇವನು."

ಸಾಳುವ ಮಂಗು, ಇಮ್ಮಡಿ ಕೆಂಪಣ್ಣನ ದಣ್ಣಾಯಕನಾಗಿದ್ದುಕೊಂಡು ತುಂಡೀರಮಂಡಲ, ಶ್ರೀರಂಗ, ಮಧುರೆಗಳ ದಿಗ್ವಿಜಯದಲ್ಲಿ ಭಾಗವಹಿಸಿದ್ದ. ಸಾಳುವ ಮಂಗುವಿನ ಮಗನಾದ ತಿಪ್ಪರಾಜನೇ ಪ್ರೌಢದೇವರಾಯರ ಸೋದರಿ ಹರಿಯಮ್ಮನ ಪತಿ. ಇವನ ಮಗನಾದ ಗೋಪ ತಿಪ್ಪಭೂಪಾಲ ವಾಮನನ ಕಾವ್ಯಾಲಂಕಾರಸೂತ್ರದ ಮೇಲೆ ಟೀಕೆ ಬರೆದಿರುವುದಿಲ್ಲದೆ ಸಂಗೀತ ಲಕ್ಷಣವನ್ನು ಕುರಿತ ತಾಳದೀಪಿಕಾ ಗ್ರಂಥವನ್ನೂ, ಕಾಮಧೇನುವನ್ನೂ ರಚಿಸಿದ್ದಾನೆ.

ನರಸಿಂಹನಾಯಕನ ತಾಯಿತಂದೆಗಳಾದ ಗುಂಡ ಮತ್ತು ಮಲ್ಲಾಂಬಿಕೆ ಯರಿಗೆ ಬಹಳಕಾಲ ಮಕ್ಕಳಾಗಲಿಲ್ಲ. ಅವರು ಅಹೋಬಲದ ನರಸಿಂಹ ಸ್ವಾಮಿಯ ಸೇವೆಮಾಡಿ, ಮೊರೆಯಿಡಲು, ದೇವರು ಕನಸಿನಲ್ಲಿ ಬಂದು ' ಚಕ್ರವರ್ತಿಯೋಗವುಳ್ಳ ಮಗ ಹುಟ್ಟುತ್ತಾನೆ, ಯೋಚಿಸಬೇಡಿ ' ಎಂದು ಅನುಗ್ರಹಿಸಿದನಂತೆ. ಕಲಕಾಲಾನಂತರ ಹುಟ್ಟಿದ ಮಗನಿಗೆ ತಮ್ಮ ಆರಾಧ್ಯ ದೇವನಾದ ನರಸಿಂಹಸ್ವಾಮಿಯ ಹೆಸರನ್ನೇ ದಂಪತಿಗಳಿಟ್ಟರು.

ನಾಯಕರು ತಮ್ಮ ಭವ್ಯಪರಂಪರೆಯನ್ನು ವಿಜಯನಗರ ಸಾಮ್ರಾಜ್ಯಾಧೀಶರಿಗೂ ತಮ್ಮ ಮನೆತನಕ್ಕೂ ಇದ್ದ ಪೂರ್ವ ಸಂಬಂಧವನ್ನೂ ಸದಾ ನೆನಪಿನಲ್ಲಿಟ್ಟುಕೊಂಡಿದ್ದರು.

' ನಾಯಕರು ಚಂದ್ರಗಿರಿಯಲ್ಲಿ ಪ್ರತಿಸರ್ಕಾರ ರಚಿಸುತ್ತಿರುವರೇ ?

ಅವರ ಅಟ್ಟಹಾಸದ ಉದ್ದೇಶವೇನು ? ಇಂದಲ್ಲ ನಾಳೆ ನಾಯಕರು ವಿಜಯನಗರ ಸಾಮ್ರಾಜ್ಯವನ್ನೇ ಕಬಳಿಸುವರೇ ?

ನಮ್ಮನ್ನು ಸಿಂಹಾಸನದ ಮೇಲೆ ಕೂಡಿಸಿದ ನಾಯಕರೇ ನಮಗೆ ಮುಳುವಾಗುವರೇ ?'

ನರಸಿಂಹನಾಯಕರೇ ವಿರೂಪಾಕ್ಷರಾಯರಿಗೆ ಮುಳುವಾಗಬಹುದೆನ್ನುವು ದಕ್ಕೆ ನಿದರ್ಶನಗಳು ದೊರೆಯಲಾರಂಭಿಸಿದವು.

ನರಸಿಂಹನಾಯಕರು ತಾವು ನೀಡುತ್ತಿದ್ದ ದಾನ, ಧರ್ಮ, ವೃತ್ತಿಗಳಲ್ಲಿ ಕೆತ್ತಿಸುತ್ತಿದ್ದ ಶಾಸನಗಳಲ್ಲಿ ಕಾಣಿಸುತ್ತಿದ್ದ

'ಮಹಾಮಂಡಲೇಶ್ವರ ಕಠಾರಿ ಸಾಳುವ ನರಸಿಂಗರಾಯರು ಮಹಾರಾಯರು.

'ಮಹಾಮಂಡಲೇಶ್ವರ ಮೇದಿನಿ ಮೀಸರ ಗಂಡ ಕಠಾರಿ ಸಾಳುವ ನರಸಿಂಗಯ್ಯ ದೇವ ಮಹಾ ಅರಸು.

'ಶ್ರೀಮಾನ್ ಮೂವರು ರಾಯರ ಗಂಡಭೇರುಂಡ ನರಸಿಂಗ ದೇವ.

'ಶ್ರೀ ಪೃಥ್ವೀವಲ್ಲಭ ನರಸಿಂಗರಾಯ ಮಹಾರಾಯ.

'ರಾಜಪರಮೇಶ್ವರ ಪ್ರೌಢಪ್ರತಾಪ ನರಸಿಂಗರಾಯ.

'ಗಜಪತಿರಾಯೇಭ ಗಂಡಭೇರುಂಡ, ದುಷ್ಟರಾಜ್ ಮೃಗ ಶಾರ್ದೂಲ.

'ಚಾಪಟ್ಟ ಮಲ್ಲ.

'ಧರಣೀ ವರಾಹ.

'ಮೋಹನ ಮುರಾರಿ.'

ಇತ್ಯಾದಿ ಬಿರುದುಗಳು ವಿಜಯನಗರದ ಪ್ರಭುಗಳ ಬಿರುದುಗಳಾಗಿದ್ದವು.

'ಯಾರ ಅಪ್ಪಣೆ ಪಡೆದು ನರಸಿಂಹನಾಯಕರು ಈ ಬಿರುದುಗಳನ್ನು ಬಳಸುತ್ತಿದ್ದಾರೆ ?

'ನರಸಿಂಹನಾಯಕರನ್ನು ಕೇಳುವುದು ಹೇಗೆ ?

'ದೂರದಲ್ಲಿರುವ ಸ್ನೇಹಿತರನ್ನು ಹತ್ತಿರ ಬರಮಾಡಿಕೊಂಡು ಶತ್ರು ವನ್ನಾಗಿ ಮಾಡಿಕೊಳ್ಳುವುದೇ ?'

ಆದರೆ ನರಸಿಂಹನಾಯಕರ ವರ್ತನೆ ಸಾಮ್ರಾಜ್ಯಗೌರವಕ್ಕೆ ಧಕ್ಕೆ ತರುವದಾಗಿತ್ತು. ವಿರೂಪಾಕ್ಷರಾಯರ ಅಸಹಾಯಕತೆಯನ್ನು ಕಂಡು ಜನ ಒಳಗೊಳಗೇ ಮುಸಿಮುಸಿ ನಗುತ್ತಿದ್ದರು.

ನರಸಿಂಹನಾಯಕರನ್ನು ರಾಜಧಾನಿಗೆ ಬರಮಾಡಿಕೊಂಡು, ಸಾಮ್ರಾಜ್ಯದ ಬಿರುದುಗಳನ್ನು ಅವರು ಹೇಗೆ ಧರಿಸಿದರೆಂದು ವಿಚಾರಣೆ ಮಾಡಬೇಕೆಂದು ಕುಚೇಲನಾಯಕ ಸಲಹೆಯಿತ್ತ.

" ಅವರು ಬರುವುದಕ್ಕೆ ನಿರಾಕರಿಸಿದರೆ ನಮಗೆ ಅಪಮಾನವಾಗುತ್ತದೆ. ಬಂದು ' ನಮ್ಮ ಇಷ್ಟ ' ಎಂದು ಹೇಳಿದರೆ ಮತ್ತಷ್ಟು ಅಪಮಾನವಾಗುತ್ತದೆ.– ಸದ್ಯಕ್ಕೆ ತಾಟಸ್ಥ್ಯಧೋರಣೆ ತಳೆಯುವುದೇ ಶ್ರೇಯಸ್ಕರ. ನಮ್ಮ ಬೇಹುಗಾರರು ಚಂದ್ರಗಿರಿಯನ್ನು ಬಳಸಿ ಅಲ್ಲಿ ನಡೆಯುವ ಪ್ರತಿಯೊಂದು ವಿದ್ಯಮಾನವನ್ನೂ ಕಾಲಕಾಲಕ್ಕೆ ನಮಗೆ ತಿಳಿಸುತ್ತಿರಲಿ. ಪ್ರಬಲ ಕಾರಣ ಒದಗಿದೊಡನೆಯೇ ನಾವು ಮುಂದಿನ ಕಾರ್ಯ ಕೈಗೊಳ್ಳುವೆವು "

ಎಂದು ವಿರೂಪಾಕ್ಷರಾಯರು ಹೇಳಿದರು.

## ೫

ತಿರುಪತಿಯ ಸುದ್ದಿ ಕೇಳಿಕೇಳಿ ನರಸಿಂಹನಾಯಕರಿಗೆ ಸಖೇದಾಶ್ಚರ್ಯ ವಾಗಿತ್ತು.

ಒಂದು ದಿನ ತಿರುಪತಿಯಿಂದ ಬಂದ ಭಕ್ತರತಂಡವೊಂದು ನಾಯಕರನ್ನು ನೋಡಬಯಸಿತು.

ಅವರಿಗೆ ದರ್ಶನವಿತ್ತ ನಾಯಕರು ಯೋಗಕ್ಷೇಮ ವಿಚಾರಿಸಲು, ತಂಡದ ನಾಯಕ ದೀರ್ಘವಾಗಿ ರೋಧಿಸುತ್ತ ನಾಯಕರ ಪಾದಗಳ ಮೇಲೆ ಬಿದ್ದು,

"ತಿರುಪತಿ ಕ್ಷೇತ್ರ ಅನಾಯಕ ಪಾಜ್ಯವಾಗಿದೆ. ಅರ್ಚಕರೆಲ್ಲಾ ದರೋಡೆಕಾರರಾಗಿದ್ದಾರೆ. ನಮ್ಮನ್ನವರು ಸುಲಿದುದಲ್ಲದೆ, ನಾವು ದೇವರಿಗೆ ತೆಗೆದುಕೊಂಡು ಹೋಗಿದ್ದ ಹರಕೆಯ ಹಣ, ಆಭರಣಗಳು, ವಸ್ತ್ರಗಳನ್ನೂ ಹೊತ್ತು ಹಾಕಿದರು. ಜೀವವುಳಿಸಿಕೊಂಡು ತಿರುಪತಿಯಿಂದ ಪಾರಾಗುವುದಕ್ಕೇ ನಮಗೆ ಸಾಕುಸಾಕಾಯಿತು."

ಎಂದು ಬಿನ್ನವಿಸಿಕೊಂಡ.

ನಾಯಕರ ಮುಖಮುದ್ರೆ ಗಂಭೀರವಾಯಿತು.

ಅವರು ಚಿಂತಾಪರವಶರಾಗಿ,

"ಅರ್ಚಕರು ಆಚರಿಸಿದ ಅತ್ಯಾಚಾರವನ್ನು ನೀವೇಕೆ ಸಹಿಸಿದಿರಿ – ಪ್ರತಿಭಟಿಸಲಿಲ್ಲವೇಕೆ ?"

"ಬಹು ಸಂಖ್ಯಾತ ಅರ್ಚಕರ ಮುಂದೆ ನಾವು ನಿಲ್ಲಲು ಸಾಧ್ಯವೇ ? ದೇವಸ್ಥಾನದ ಮೊಖ್ತೇಸರರು, ಊಳಿಗದವರು, ಕಾರಭಾರಿಗಳೆಲ್ಲರೂ ಈ ಸುಲಿಗೆಯಲ್ಲಿ ಸಮಭಾಗಿಗಳು. ಇವರೆಲ್ಲರ ಬೆಂಬಲದಿಂದಲೇ ಅರ್ಚಕರು ಭಕ್ತರನ್ನು ಪೀಡಿಸುತ್ತಿದ್ದಾರೆ."

"ಇರಲಿ"

ಎಂದ ನಾಯಕರು, ಅರವೀಟಿ ಬುಕ್ಕನಾಯಕನನ್ನು ಬರಮಾಡಿಕೊಂಡು,

" ಇವರೆಲ್ಲರಿಗೂ ಯೋಗ್ಯ ಆತಿಥ್ಯಮಾಡಿ, ಸ್ವಗ್ರಾಮ ತಲುಪುವುದಕ್ಕೆ ಅನುಕೂಲ ಮಾಡಿಕೊಡಿ "

ಎಂದು ಆಜ್ಞೆ ವಿಧಿಸಿದರು.

ಒಡೆಯರ ಸಮೀಪಕ್ಕೆ ಬಂದ ಚಿಟ್ಟಿ ಗಂಗಣ್ಣನಾಯಕರು,

" ತಿರುಪತಿ ಅರ್ಚಕರ ಹಾವಳಿ ಸಹಿಸಲಸಾಧ್ಯವಾಗಿದೆ. ಯಾತ್ರಾರ್ಥಿಗಳ ಮಾನ ಪ್ರಾಣ, ಸಂಪತ್ತುಗಳಿಗೆ ಹಾನಿ ಬರುವುದು ಸಾಮ್ರಾಜ್ಯಕ್ಕೇ ಅಪಮಾನಕರ. ಈ ವಿಷಯವನ್ನು ತಾವೇ ಶ್ರೀಶ್ರೀ ವಿರೂಪಾಕ್ಷರಾಯರಿಗೆ ಅರಿಕೆಮಾಡಿಕೊಂಡು, ಸೂಕ್ತಕ್ರಮ ಕೈಗೊಳ್ಳಲು ಸೂಚಿಸಬೇಕು."

" ಶ್ರೀ ವಿರೂಪಾಕ್ಷರಾಯರೇ ತಿರುಪತಿ ಅರ್ಚಕರ ಮಹಾ ಪೋಷಕರೆಂಬುದನ್ನು ಮರೆತಿರಾ ಗಂಗಣ್ಣನವರೇ."

" ತಿರುವೆಂಕಟನಾಥನ ಮೇಲಣ ಭಕ್ತಿಪ್ರೇಮದಿಂದ ಮಹಾ ಪ್ರಭುಗಳು ಅರ್ಚಕರಿಗೆ ಆಶ್ರಯವಿತ್ತಿದ್ದಾರೆ. ಇದರಲ್ಲಿ ಅವರ ಸ್ವಾರ್ಥವೇನಿದೆ ?"

"ರಾಜಧಾನಿಯಲ್ಲಿ ಕಳವು ಮಾಡುವವನಿಗೆ ವಿಧಿಸುವ ಶಿಕ್ಷೆಯಾವುದು?"

" ಹಸ್ತಚ್ಛೇದನ !"

"ಅರ್ಚಕರು ಮಾಡುವ ಕಳವು ಕಳವಲ್ಲವೇ ? ಹೊಟ್ಟೆಯ ಪಾಡಿಗಾಗಿ ಕಳ್ಳತನ ಮಾಡುವವನನ್ನು ನಾವು ಕಠಿಣ ಶಿಕ್ಷೆಗೆ ಒಳಪಡಿಸುವುದಾದರೆ, ಸದಾ ಸರ್ವದಾ ಭಗವಂತನ ಸನ್ನಿಧಿಯಲ್ಲಿರುವ ಅರ್ಚಕರು ಮಾಡುವ ಕಳ್ಳತನಕ್ಕೆ ಎಂಥಾ ಶಿಕ್ಷೆ ವಿಧಿಸಬೇಕು ?"

" ಅವರು ಶಿಕ್ಷಾರ್ಹರೆಂಬುದರಲ್ಲಿ ಸಂದೇಹವಿಲ್ಲ – ತಾವೇಕೆ ಮಹಾ ಪ್ರಭುಗಳಿಗೆ ಒಂದು ಮಾತು ಹೇಳಬಾರದು ?"

" ಹೇಳಿಯಾಯಿತು ಗಂಗಣ್ಣನವರೇ – ಚಂದ್ರಗಿರಿಗೆ ನಾವು ಹೊರಡುವ ಪೂರ್ವದಲ್ಲಿಯೇ ಈ ವಿಷಯ ವಿರೂಪಾಕ್ಷರಾಯರಲ್ಲಿ ಪ್ರಸ್ತಾಪಿಸಿ, ಅವರಿಗೆ ಎಚ್ಚರಿಕೆ ಕೊಟ್ಟಿದ್ದೆವು."

" ಮಹಾಪ್ರಭುಗಳು ತಮ್ಮ ಸಲಹೆಯನ್ನು ಉಪೇಕ್ಷಿಸಿದರೇ !"

" ಹೌದು."

" ಇದಕ್ಕೆ ಪರಿಹಾರ ?"

" ಯೋಚಿಸಿದ್ದೇವೆ – ವ್ಯಾಧಿ ಉಲ್ಬಣಿಸಿದೆ. ಔಷಧೋಪಚಾರ

ಗಳಿಂದ ಗುಣವಾಗುವ ಸಂಭವ ಕಂಡುಬರುತ್ತಿಲ್ಲ – ಶಸ್ತ್ರ ಚಿಕಿತ್ಸೆ ಅನಿವಾರ್ಯವಾಗಿದೆ."

"ಶಸ್ತ್ರಚಿಕಿತ್ಸೆಯೇ ?"

"ಹೌದು. ನೀವು ಇಲ್ಲಿಂದ ಕೂಡಲೆ ತಿರುಮಲೆ ಕ್ಷೇತ್ರಕ್ಕೆ ಹೋಗಿ, ಅರ್ಚಕರು, ಮೊಖ್ತೇಸರರು, ಕಾರಭಾರಿಗಳು ಊಳಿಗದವರನ್ನೆಲ್ಲಾ ಬರಮಾಡಿಕೊಂಡು, ಸಾರ್ವಜನಿಕವಾಗಿ ವಿಚಾರಣೆ ನಡಸಿ, ಕ್ಷೇತ್ರಕ್ಕೆ ಬಂದಿರುವ ಯಾತ್ರಾರ್ಥಿಗಳನ್ನೆಲ್ಲಾ ಬರಮಾಡಿಕೊಂಡು, ಅವರ ಹೇಳಿಕೆಗಳನ್ನು ಪಡೆಯಿರಿ. ಅರ್ಚಕರು,ಅವರ ಬೆಂಬಲಿಗರ ಮೇಲೆ ಬಂದಿರುವ ಆಪಾದನೆಗಳು ಋಜುವಾತಾದರೆ, ಎಲ್ಲರಿಗೂ ಮರಣದಂಡನೆ ವಿಧಿಸಿ."

ಗಡಗಡ ನಡುಗಿ ಆಪಾದಮಸ್ತಕ ಬೆವರಿದ ಗಂಗಣ್ಣನಾಯಕ,

"ಒಡೆಯರೇ, ತಿರುಪತಿಕ್ಷೇತ್ರ ವಿಜಯನಗರ ಸಾಮ್ರಾಜ್ಯದ ಅಧೀನಕ್ಕೊಳಪಟ್ಟಿದೆ. ಅರ್ಚಕರ ಮೇಲೆ ಬಂದಿರುವ ಆಪಾದನೆಗಳನ್ನು ವಿಚಾರಮಾಡಿ, ಶಿಕ್ಷೆ ವಿಧಿಸುವುದು ಮಹಾಪ್ರಭುಗಳಿಗೆ ಸಂಬಂಧಿಸಿದ ವಿಷಯ. ನಾವು ಈ ಕಾರ್ಯ ನಿರ್ವಹಿಸಿದರೆ ಅವರ ಅಧಿಕಾರದ ಎಲ್ಲೆಯನ್ನು ಅತಿಕ್ರಮಿಸಿದಂತಾಗುತ್ತದೆ – ವಿನಾಕಾರಣ ಮಹಾಪ್ರಭುಗಳಿಗೂ ತಮಗೂ ವೈಮನಸ್ಯ ಬೆಳೆಯುತ್ತದೆ."

"ನಿಮ್ಮ ಹೇಳಿಕೆಯಂತೆ ನಾವು ಶ್ರೀವಿರೂಪಾಕ್ಷರಾಯರಿಗೆ ಮೊದಲು ರಾಯಸ ಕಳಿಸಬೇಕಾಗುತ್ತದೆ – ಈ ವ್ಯವಹಾರದಲ್ಲಿ ಅವರೇ ಪ್ರಥಮ ಅಪರಾಧಿಗಳು. ಪ್ರಭುಗಳ ಬೆಂಬಲವಿದೆಯೆಂದಲ್ಲವೇ ತಿರುಪತಿ ಅರ್ಚಕರು ಇಷ್ಟು ಮದಿಸಿರುವುದು. ಭಕ್ತಕೋಟಿಯನ್ನೂ, ತಿರುವೆಂಕಟನಾಥನನ್ನೂ ಈ ದಬ್ಬಾಳಿಕೆಯಿಂದ ರಕ್ಷಿಸಬೇಕಾದುದು ನಮ್ಮ ಕರ್ತವ್ಯ."

"ಅರ್ಚಕರೆಲ್ಲಾ ಬ್ರಾಹ್ಮಣರು – ವೈಷ್ಣವರು. ಅವರಿಗೆ ಮರಣದಂಡನೆ ವಿಧಿಸಿ ನಾವು ಬ್ರಹ್ಮಹತ್ಯಾದೋಷ ಕಟ್ಟಿಕೊಳ್ಳುವುದೇ ?"

ಗಹಗಹಿಸಿ ನಕ್ಕ ನರಸಿಂಹನಾಯಕರು,

"ಈ ಬ್ರಹ್ಮರಾಕ್ಷಸರನ್ನು ಬ್ರಾಹ್ಮಣರೆಂದು ಕರೆಯುವಿರಾ ? ಇವರಲ್ಲಿ ಬ್ರಾಹ್ಮಣ್ಯದ ಕುರುಹಾದರೂ ಉಳಿದಿದೆಯೇ ? ಸ್ವಧರ್ಮಚ್ಯುತರಾಗಿ ಚಂಡಾಲವೃತ್ತಿಯನ್ನನುಸರಿಸಿರುವ ಇವರು ಬ್ರಾಹ್ಮಣರಲ್ಲ, ದೈತ್ಯರು. ಕ್ಷೇತ್ರ

ದೈತ್ಯರಾಗಿದ್ದುಕೊಂಡು, ಭಕ್ತವೃಂದವನ್ನು ಹಿಂಸಿಸುವ ಎಲ್ಲ ಅರ್ಚಕರಿಗೂ ತಿರುಪತಿಯ ಪ್ರಕರಣ ಎಚ್ಚರಿಕೆ ನೀಡುವಂತಾಗಬೇಕು. – ನಾವು ವಿಧಾಯಕರು, ನೀವು ಆಜ್ಞಾಧಾರಕರು. ಯಾವ ದೋಷ ಬಂದರೂ ನಮಗೆ ಬರುತ್ತದೆ. ಈ ಬಗ್ಗೆ ನೀವು ಯೋಚಿಸಬೇಕಾಗಿಲ್ಲ."

" ನನಗೆ ದೋಷ ಬಂದರೂ ಚಿಂತೆಯಿಲ್ಲ – ತಮಗೆ ಬರಬಾರದೆಂದು ಇಷ್ಟು ಯೋಚಿಸಿದೆ. ತಮ್ಮ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸುತ್ತೇನೆ "

ಎಂದು ಚಿಟ್ಟೆ ಗಂಗಣ್ಣನಾಯಕ ಆಶ್ವಾಸನವಿತ್ತ.

ನರಸಿಂಹನಾಯಕರ ನಿರೂಪ ಹೊತ್ತುಕೊಂಡು, ಮಿತಪರಿವಾರದೊಂದಿಗೆ ತಿರುಪತಿ ಕ್ಷೇತ್ರಕ್ಕೆ ಬಂದ ಗಂಗಣ್ಣನಾಯಕ, ತಿರುವೆಂಕಟನಾಥನ ದೇವಾಲಯದ ಮೊಗಸಾಲೆಯಲ್ಲಿ ಕುಳಿತು, ಈಶ್ವರನಾಯಕನೊಂದಿಗೆ ಅರ್ಚಕರಿಗೆ ಹೇಳಿ ಕಳಿಸಿದ.

ಅರ್ಚಕರ ಮುಖಂಡನಾಗಿದ್ದ ದೇಶಿಕಾಚಾರ್ಯ,

" ನಿಮ್ಮ ನಾಯಕರು ಯಾರೋ ನಾವರಿಯೆವು. ಅವರು ಯಾರೇ ಆಗಿದ್ದರೂ ಈ ರೀತಿ ಆಜ್ಞೆಮಾಡಲು ಅಧಿಕೃತರಾಗಿಲ್ಲ. ಈ ಕ್ಷೇತ್ರದಲ್ಲಿ ಸರ್ವಾಧಿಕಾರಿಗಳು ನಾವು – ನಮಗೆ ಆಜ್ಞೆ ವಿಧಿಸುವ ಅಧಿಕಾರವಿರುವುದು ವಿಜಯನಗರದ ಮಹಾಪ್ರಭುಗಳಾದ ಶ್ರೀಶ್ರೀ ವಿರೂಪಾಕ್ಷರಾಯರಿಗೆ ಮಾತ್ರ. ಅವರಿಂದ ನೀವು ನಿರೂಪ ತಂದಲ್ಲಿ ನಾವು ನಿಮ್ಮ ನಾಯಕರನ್ನು ಬಂದು ಕಾಣುತ್ತೇವೆ " ಎಂದ.

ನಿರುತ್ತರನಾದ ಈಶ್ವರನಾಯಕ, ಮೊಗಸಾಲೆಗೆ ಬಂದು ದೇಶಿಕಾಚಾರ್ಯರ ಪ್ರತಿಭಟನೆಯನ್ನು ವಿವರಿಸಲು, ಕುಪಿತನಾದ ಗಂಗಣ್ಣನಾಯಕ,

" ಅರ್ಚಕರನ್ನೆಲ್ಲಾ ಹೆಡೆಮುರಿಕಟ್ಟಿ ಇಲ್ಲಿಗೆ ಎಳೆದುಕೊಂಡು ಬಾ ಈಶ್ವರನಾಯಕ. ಈ ಕ್ಷೇತ್ರದಲ್ಲಿ ಯಾರಿಗೆ ಅಧಿಕಾರವಿದೆಯೆನ್ನುವುದನ್ನು ನಾನು ಸಿದ್ಧಮಾಡಿಕೊಡುತ್ತೇನೆ " ಎಂದ.

ಚಂದ್ರಗಿರಿಯ ಸೈನಿಕರು ಅರ್ಚಕರ ಗೃಹಗಳನ್ನೆಲ್ಲಾ ಬಳಸಿ, ಅವರನ್ನು ಹಗ್ಗಗಳಿಂದ ಬಂಧಿಸಿ ಎಳತಂದು ಗಂಗಣ್ಣನಾಯಕನ ಮುಂದೆ ನಿಲ್ಲಿಸಿದರು.

ನಾಯಕನನ್ನು ಲಕ್ಷ್ಯಕ್ಕೂ ತಂದುಕೊಳ್ಳದೆ ಉದ್ಧಟನಾಗಿ ನಿಂತಿದ್ದ ದೇಶಿಕಾಚಾರ್ಯನನ್ನು ನೋಡಿ ಗಂಗಣ್ಣನಾಯಕ,

" ದೇಶಿಕಾಚಾರ್ಯರೆನ್ನುವರು ನೀವೇನೋ ?"

" ಹೌದು – ಅದೇ ನನ್ನ ಹೆಸರು."

"ಕ್ಷೇತ್ರದ ಅರ್ಚಕರಿಗೆಲ್ಲಾ ನೀವು ಮುಖಂಡರೆಂದು ಕೇಳಿದ್ದೇನೆ."

" ಇರಬಹುದು – ನಮ್ಮನ್ನಿಲ್ಲಿ ಬರಮಾಡಲು ನಿಮಗೇನು ಅಧಿಕಾರ ?"

" ಅದು ಕ್ಷಿಪ್ರವಾಗಿ ನಿಮಗೇ ತಿಳಿದು ಬರುತ್ತದೆ. ನಿಮ್ಮ ಮೇಲೆ ಬಂದಿರುವ ಅಪಾದನೆಗಳಿಗೇನು ಉತ್ತರ ಹೇಳುವಿರಿ ?"

" ಏನು ಅಪಾದನೆ ?"

"ಕ್ಷೇತ್ರಕ್ಕೆ ಬರುವ ಯಾತ್ರಿಕರನ್ನೆಲ್ಲಾ ನೀವೂ, ನಿಮ್ಮ ಅರ್ಚಕರೂ, ದೇವಸ್ಥಾನದ ಊಳಿಗದವರೂ ಸುಲಿದು ತಿನ್ನುತ್ತಿರುವಂತೆ ಮೊನ್ನೆ ಇಲ್ಲಿಂದ ಚಂದ್ರಗಿರಿಗೆ ಬಂದ ಯಾತ್ರಿಕರ ತಂಡ ನಿಮ್ಮ ದುರ್ನಡತೆಯನ್ನು ಸಾದ್ಯಂತವಾಗಿ ನಿರೂಪಿಸಿದ್ದಾರೆ."

"ನಿಮಗೆ ನಾವು ಉತ್ತರ ಕೊಡಬೇಕಾದ ಅಗತ್ಯವಿಲ್ಲ – ವಿಜಯನಗರದ ಮಹಾಪ್ರಭುಗಳೊಬ್ಬರಿಗೇ ನಾವು ಉತ್ತರವಾದಿಗಳು."

" ತಿರುವೆಂಕಟನಾಥನಿಗೂ, ಅವನ ಭಕ್ತರಿಗೂ ನೀವು ಉತ್ತರವಾದಿಗಳಾಗಿದ್ದೀರಿ. ಅವರಲ್ಲಿ ಹಿರಿಯ ಭಕ್ತರಾದ ಚಂದ್ರಗಿರಿಯ ಶ್ರೀಶ್ರೀ ಸಾಳುವ ನರಸಿಂಹನಾಯಕರ ಪ್ರತಿನಿಧಿಯಾಗಿ ನಾನಿಲ್ಲಿ ಬಂದು ನಿಮ್ಮನ್ನು ಪ್ರಶ್ನಿಸುತ್ತಿದ್ದೇನೆ."

" ನಿಮ್ಮಂಥ ಹಾದಿಬೀದಿ ನಾಯಕರಿಗೆ ನಾವು ಉತ್ತರಕೊಡಬೇಕಾದ ಅಗತ್ಯವಿಲ್ಲ."

ದೇಶಿಕಾಚಾರ್ಯನ ಔದ್ಧತ್ಯ ಕಂಡು ಕುಪಿತನಾದ ಈಶ್ವರನಾಯಕ, ಕೈಯಲ್ಲಿದ್ದ ಬಾರುಗೋಲಿನಿಂದ ಎರಡು ಪೆಟ್ಟು ಬಿಗಿದು,

" ಮರ್ಯಾದೆ ಬೇಕಾದರೆ, ಮರ್ಯಾದೆ ಕೊಡುವುದನ್ನು ಮೊದಲು ಕಲಿತುಕೊಳ್ಳಿ " ಎಂದ.

ಆರಕ್ತಗೊಂಡಿದ್ದ ಮುಖವನ್ನು ಮೇಲಕ್ಕೆತ್ತಿದ ದೇಶಿಕಾಚಾರ್ಯ,

" ನಿಮ್ಮ ದುರಾಚರಣೆಗೆ ತಕ್ಕ ಶಾಸ್ತಿ ಮಾಡಿಸಿದಲ್ಲದೆ ನಾನು ದೇಶಿಕಾಚಾರ್ಯನಲ್ಲ."

" ಶಾಸ್ತಿ ಮಾಡುವವರೆಗೆ ಜೀವ ಉಳಿಸಿಕೊಳ್ಳುವ ಯೋಚನೆ ಮಾಡಿ ದೇಶಿಕಾಚಾರ್ಯರೇ "

ಎಂದು ಈಶ್ವರನಾಯಕ ವ್ಯಂಗ್ಯವಾಗಿ ನುಡಿದ.

" ಮಾಡಿರುವ ತಪ್ಪನ್ನು ಒಪ್ಪಿಕೊಂಡು, ಯಾತ್ರಿಕರ ಹಣ, ವಸ್ತ್ರಾಭರಣಗಳನ್ನು ಹಿಂದಿರುಗಿಸಿ, ಇನ್ನು ಮುಂದೆ ಯೋಗ್ಯರೀತಿಯಲ್ಲಿ ನಡೆದುಕೊಳ್ಳುತ್ತೇವೆಂದು ನೀವು ಮುಚ್ಚಳಿಕೆ ಬರೆದುಕೊಡುವುದಾದರೆ, ನಿಮ್ಮನ್ನು ಕ್ಷಮಿಸಲು ಸಿದ್ಧನಾಗಿದ್ದೇನೆ. ನೀವು ಔದ್ಧತ್ಯವನ್ನು ಮುಂದುವರಿಸುವುದಾದರೆ. ತಕ್ಕ ಕ್ರಮ ನಾನು ಕೈಗೊಳ್ಳಬೇಕಾಗುತ್ತದೆ."

" ನಿಮ್ಮ ಆಪಾದನೆ ಸುಳ್ಳು – ದುರುದ್ದೇಶದಿಂದ ಪ್ರೇರಿತರಾಗಿ ನೀವು ನಮ್ಮನ್ನು ಅಪಮಾನಗೊಳಿಸಲು ಇಲ್ಲಿಗೆ ಬಂದಿರುವಿರಿ."

" ಹಾಗೇನು ?"

ಎಂದು ಚಿಟ್ಟಿ ಗಂಗಣ್ಣನಾಯಕ, ಕ್ಷೇತ್ರದಲ್ಲಿದ್ದ ಎಲ್ಲ ಯಾತ್ರಿಕರನ್ನೂ ಬರಮಾಡಿಕೊಂಡು, ಅವರನ್ನು ಪ್ರಶ್ನಿಸಿ ನಿಜಸ್ಥಿತಿಯನ್ನು ಬಹಿರಂಗ ಪಡಿಸಿದ.

ತನಗಾದ ತೇಜೋಭಂಗವನ್ನು ಸಹಿಸಲಾಗದೆ ದೇಶಿಕಾಚಾರ್ಯ,

" ಸುಳ್ಳು – ಶುದ್ಧ ಸುಳ್ಳು – ಇವರು ಹೇಳುತ್ತಿರುವುದೆಲ್ಲಾ ಸುಳ್ಳು. ನೀವು ನಮ್ಮ ಮೇಲೆ ಒಳಸಂಚು ಮಾಡುತ್ತಿರುವಿರಿ – ಇದು ರಾಜದ್ರೋಹ – ಬ್ರಹ್ಮದ್ರೋಹ..........."

" ಬ್ರಹ್ಮಹತ್ಯೆ ಮಾಡಲು ನನ್ನ ಮನಸ್ಸು ಹಿಂದೆಗೆಯುತ್ತಿದೆ ದೇಶಿಕಾಚಾರ್ಯರೇ – ಈಗಲೂ ನನ್ನ ಮಾತು ಕೇಳಿ ತಪ್ಪು ಒಪ್ಪಿಕೊಂಡು ಮುಚ್ಚಳಿಕೆ ಬರೆದುಕೊಡಿ."

" ಅದೆಂದಿಗೂ ಆಗತಕ್ಕದಲ್ಲ "

ಎಂದು ದೇಶಿಕಾಚಾರ್ಯ ನಿರಾಕರಿಸಿಬಿಟ್ಟ.

ಪೀಠದಿಂದ ಎದ್ದುನಿಂತ ಚಿಟ್ಟಿ ಗಂಗಣ್ಣನಾಯಕ ಗಂಭೀರವದನನಾಗಿ,

" ಶ್ರೀ ತಿರುಪತಿ – ತಿರುಮಲೆ ಕ್ಷೇತ್ರದ ಅರ್ಚಕರು, ಅಧಿಕಾರಿಗಳು, ಊಳಿಗದವರಾಗಿ, ಭಗವಂತನ ಸೇವೆಗೆ ಅಡ್ಡಿಯೊದಗಿಸುತ್ತ, ಕ್ಷೇತ್ರಕ್ಕೆ ಬರುವ ಭಕ್ತವೃಂದವನ್ನು ಪರಿಪರಿಯ ಹಿಂಸೆಗೀಡು ಮಾಡಿರುವ ದೇಶಿಕಾಚಾರ್ಯರಿಗೂ, ದೇವಸ್ಥಾನದ ಸಮಸ್ತ ಪರಿವಾರದವರಿಗೂ, ಚಂದ್ರಗಿರಿಯ ಪ್ರಭು

ಗಳಾದ ಶ್ರೀಶ್ರೀ ಸಾಳುವ ನರಸಿಂಹನಾಯಕರ ಆಜ್ಞೆಯ ಮೇರೆ ಮರಣದಂಡನೆ ವಿಧಿಸಲಾಗಿದೆ. ಭಗವನ್ಮಂದಿರವನ್ನು ಪರಿಶುದ್ಧವಾಗಿಡದಿರುವ ಎಲ್ಲ ಕ್ಷೇತ್ರ ದೈತ್ಯರಿಗೂ ಈ ಮೂಲಕ ಎಚ್ಚರಿಕೆ ಕೊಡುತ್ತಿದ್ದೇನೆ. ಇಂದು ತಿರುಪತಿಯ ಅರ್ಚಕರಿಗೆ ಒದಗಿರುವ ಗತಿ ನಾಳೆ ಅವರಿಗೂ ಒದಗುವುದರಲ್ಲಿ ಸಂದೇಹವಿಲ್ಲ"

ಎಂದು ಈಶ್ವರನಾಯಕನ ಕಡೆ ತಿರುಗಿ,

" ರಾಜಾಜ್ಞೆ ಕೂಡಲೆ ಪರಿಪಾಲಿಸಲ್ಪಡಲಿ " ಎಂದ.

ಈಶ್ವರನಾಯಕ ನಸುನಗುತ್ತಾ,

" ಬಹಳ ಸಂತೋಷ " ಎಂದ.

ತಿರುಪತಿ – ತಿರುಮಲೆಯಿಂದ ಹಿಂದಿರುಗಿದ ಚಿಟ್ಟಿ ಗಂಗಣ್ಣನಾಯಕ, ಈಶ್ವರನಾಯಕ ಸಕಲ ವೃತ್ತಾಂತವನ್ನು ಸಾಳುವರಿಗೆ ಅರುಹಲು, ಅವರು 'ಒಳ್ಳೆಯದು' ಎಂದಷ್ಟೇ ನುಡಿದು ಮೌನ ತಾಳಿದರು.

ಈ ಸುದ್ದಿ ರಾಣೀವಾಸಕ್ಕೆ ಮುಟ್ಟಲು ವಿಳಂಬವಾಗಲಿಲ್ಲ.

ನಾಯಕರ ಪತ್ನಿ ಶ್ರೀರಂಗಮಾಂಬೆಗೆ ಜಂಘಾಬಲವೇ ಉಡುಗಿ ಹೋಯಿತು. 'ಎಂತಹ ಅಕಾರ್ಯವಾಯಿತು' ಎಂದು ಹಲುಬುತ್ತ ಕುಳಿತ ಶ್ರೀರಂಗಮಾಂಬೆ, ನಾಯಕರನ್ನು ಕೂಡಲೆ ಕರೆತರಲು ತನ್ನ ಸಖಿ ಭ್ರಮರಾಂಬನನ್ನು ಕಳಿಸಿಕೊಟ್ಟಳು.

ಆಲೋಚನಾ ಮಂದಿರದಲ್ಲಿ ಕುಳಿತಿದ್ದ ನಾಯಕರನ್ನು ಕಂಡ ಭ್ರಮರಾಂಬಾ,

"ಈ ಕೂಡಲೆ ರಾಣೀವಾಸಕ್ಕೆ ತಾವು ಬರಬೇಕೆಂದು ಅಮ್ಮನವರು ತಿಳಿಸಿದ್ದಾರೆ ದೇವರು" ಎಂದಳು.

"ಸ್ವಲ್ಪ ತಡೆದು ಬರುತ್ತೇನೆ – ನೀನು ನಡೀ ಭ್ರಮರಾ."

"ಇಲ್ಲ ದೇವರು, ಜತೆಯಲ್ಲಿಯೇ ಕರೆದುಕೊಂಡು ಬಾರೆಂದು ಹೇಳಿದ್ದಾರೆ."

"ನೀನೇನು ನಕ್ಷತ್ರಿಕನ ತಂಗಿ ನಕ್ಷತ್ರಿಕೆಯೇನೇ"

ಎಂದು ನಗುತ್ತ ನಾಯಕರು ಮೇಲಕ್ಕೆದ್ದು ಭ್ರಮರಾಂಬನನ್ನು ಹಿಂಬಾಲಿಸಿದರು.

ಅತಿ ದುಗುಡಗೊಂಡಿದ್ದ ಶ್ರೀರಂಗಮಾಂಬೆಯ ಮುಖನೋಡಿ ಭಯ ಗ್ರಸ್ತರಾದ ನಾಯಕರು ಅವಳ ಸಮೀಪಕ್ಕೆ ಬಂದು,

"ಏಕೆ ಶ್ರೀರಂಗಾ – ಏನಾಯಿತು ?" ಎಂದರು.

"ನಾನು ಕೇಳಿದ್ದು ದಿಟವೇ ?"

"ಯಾವ ವಿಷಯ ?"

" ತಿರುಮಲೆ ತಿರುಪತಿ ವಿಷಯ."

" ನೀನೇನು ಕೇಳಿದೆ."

" ಚಿಟ್ಟಿ ಗಂಗಣ್ಣನವರನ್ನೂ ಈಶ್ವರನಾಯಕನನ್ನೂ ಕಳಿಸಿ ನೀವು ದೇವಾಲಯದ ಅರ್ಚಕರು, ಮೊಖ್ತೇಸರರು, ಊಳಿಗದವರನ್ನೆಲ್ಲಾ ವಧೆ ಮಾಡಿಸಿದರಂತೆ !"

" ಬಹುಮಟ್ಟಿಗೆ ನಿಜ – ಆದರದು ವಧೆಯಲ್ಲ, ನ್ಯಾಯತೀರ್ಪು."

" ಅಯ್ಯೋ ಎಂಥ ಅನ್ಯಾಯ - ಬ್ರಹ್ಮಹತ್ಯಾದೋಷದಿಂದ ನಮಗಿನ್ನೆಲ್ಲಿ ಬಿಡುಗಡೆ. ನಮ್ಮನ್ನು ಮಾತ್ರವಲ್ಲದೆ ನಮ್ಮ ಸಂತತಿಯನ್ನೂ ಈ ಬ್ರಹ್ಮಹತ್ಯಾದೋಷ ಬೆನ್ನುಹತ್ತುತ್ತದಲ್ಲಾ !"

" ನೀನೂ ಅಜ್ಞಾನಿಯಂತೆ ನುಡಿದರೆ ಏನು ಪ್ರಯೋಜನ ಶ್ರೀರಂಗಾ ! ಕಳವು, ದರೋಡೆ, ಸುಲಿಗೆ, ದಬ್ಬಾಳಿಕೆಗಳಲ್ಲಿ ಮಗ್ನರಾಗಿ ಭಗವತ್ಸಾನ್ನಿಧ್ಯವನ್ನು ಹೊಲಬುಗೆಡಿಸಿದ್ದ ಪಾತಕಿಗಳನ್ನು ಬ್ರಾಹ್ಮಣರೆನ್ನಬಹುದೇ ? ಧರ್ಮ ಮತ್ತು ನ್ಯಾಯ ದೃಷ್ಟಿಯಲ್ಲಿ ದೋಷ ದೋಷವೇ ಅಲ್ಲವೇ ? ಬ್ರಾಹ್ಮಣನಿಗೊಂದು ನ್ಯಾಯ, ಬ್ರಾಹ್ಮಣನಲ್ಲದವನಿಗೊಂದು ನ್ಯಾಯ ಅನ್ವಯಿಸಿದರೆ ಲೋಕ ಮೆಚ್ಚುವುದೇ–ಭಗವಂತ ಮೆಚ್ಚುವನೆ ? ಅರ್ಚಕರು ಸಿದ್ಧಗೊಳಿಸಿದ್ದ ವಿಷದುಣಿಸನ್ನು ಅವರು ಸೇವಿಸದೆ ಇತರರು ಸೇವಿಸುವುದಕ್ಕಾಗುತ್ತದೆಯೇ ?"

"ಅಲ್ಪಸ್ವಲ್ಪ ಶಿಕ್ಷೆ ವಿಧಿಸಿ ಅವರನ್ನು ಜೀವಸಹಿತ ಬಿಡಬಹುದಾಗಿತ್ತು!"

" ಈಗ ಮಾಡಿರುವ ಅಪರಾಧಕ್ಕೆ ಪಶ್ಚಾತ್ತಾಪ ವ್ಯಕ್ತಮಾಡಿ ಇನ್ನು ಮುಂದೆ ಋಜು ಮಾರ್ಗದಲ್ಲಿ ನಡೆಯುತ್ತೇವೆಂದು ಮುಚ್ಚಳಿಕೆ ಬರೆದುಕೊಡಿ ಎಂದು ಗಂಗಣ್ಣನಾಯಕರು ಕೇಳಲು ಅರ್ಚಕರ ಮುಖಂಡ ದೇಶಿಕಾಚಾರ್ಯರು ನಿರಾಕರಿಸಿದರಂತೆ. ವಿರೂಪಾಕ್ಷರಾಯರ ಬೆಂಬಲ ದೊರಕಿಸಿಕೊಂಡಿದ್ದ ದೇಶಿಕಾಚಾರ್ಯರು, ಅವರ ಅನುಯಾಯಿಗಳ ಅಕೃತ್ಯಗಳ ಕಥೆ ಕೇಳಿ ಕೇಳಿ ನನಗೆ ಸಾಕಾಗಿತ್ತು."

" ಇನ್ನು ಮುಂದೆ ಸ್ವಾಮಿ ಕೈಂಕರ್ಯ ಮಾಡುವವರು ಯಾರು ?"

" ಪಂಚಾಂಗ ಹೋದರೆ ನಕ್ಷತ್ರ ಹೋಗುವುದೇ ಶ್ರೀರಂಗಾ ಶ್ರೋತ್ರೀಯರೂ, ಭಗವದ್ಭಕ್ತಿ ಸಂಪನ್ನರೂ ಆದ ಸದ್ಬ್ರಾಹ್ಮಣರನ್ನು ಬೇರೆ ಕಡೆಯಿಂದ ಕರೆಯಿಸಿ ತಿರುಪತಿಯಲ್ಲಿ ಸ್ಥಾಪಿಸುತ್ತೇನೆ."

"ಬ್ರಹ್ಮಹತ್ಯಾದೋಷ ಪರಿಹಾರವಾಗುವುದು ಹೇಗೆ ?"

"ರಾವಣ ಬ್ರಾಹ್ಮಣನೆಂದು ಶ್ರೀರಾಮ, ಅವನನ್ನೇಕೆ ವಧಿಸದೆ ?"

"ಶ್ರೀರಾಮ ನಾರಾಯಣನ ಅವತಾರ."

"ಧರ್ಮದಂಡ ಹಿಡಿದಿರುವ ಪ್ರತಿಯೊಬ್ಬನೂ ನಾರಾಯಣನ ಅವತಾರವೇ ?"

"ತಿರುವೆಂಕಟನಾಥನ ಪರಮಭಕ್ತರಾದ ನೀವೇ ಇಂಥ ಅಕೃತ್ಯ ಆಚರಿಸುವುದೇ?"

"ನಾನು ತಿರುವೆಂಕಟನಾಥನ ಭಕ್ತನಾದುದರಿಂದಲೇ, ಕ್ಷೇತ್ರದ್ವೈತ್ಯ ರನ್ನು ನಿಗ್ರಹಿಸಿ, ಭಾಗವತರ ಸೇವೆ ನಿರಾಪದವಾಗಿ ನಡೆಯುವಂತೆ ಮಾಡ ಬೇಕಾಯಿತು"

"ನೀವು ಏನೇ ಹೇಳಿದರೂ ನನ್ನ ಮನಸ್ಸಿಗೆ ಶಾಂತಿ ಬಾರದು – ಬ್ರಹ್ಮಹತ್ಯಾದೋಷದಿಂದ ವಿಮುಕ್ತಿ ದೊರೆಯುವವರೆಗೆ ನಾನು ಅನ್ನ, ನೀರು ಮುಟ್ಟುವುದಿಲ್ಲ."

"ಆದದ್ದಂತೂ ಆಗಿಹೋಯಿತು – ಈಗ ನಾನೇನು ಮಾಡಬೇಕು ಹೇಳು."

"ಮುಳುಬಾಗಿಲಿಗೆ ಮನವಿಪತ್ರ ಕಳುಹಿಸಿ ಗುರುರಾಜ ಶ್ರೀ ಶ್ರೀಪಾದ ರಾಯರನ್ನು ಬರಮಾಡಿ. ಪರ ತಪಃಪ್ರಭಾವದಿಂದಲಾದರೂ ನಮ್ಮ ಕಷ್ಟ ಪರಿಹಾರವಾಗಲಿ."

"ಗುರುರಾಜರಿಗೆ ಕೂಡಲೆ ಪತ್ರ ಬರೆದು ಕಳುಹಿಸುತ್ತೇನೆ. ಅವರು ಕೂಡಲೆ ಮುಳಬಾಗಿಲಿಂದ ಹೊರಟರೂ ಇಲ್ಲಿಗೆ ಬರಲು ಎಂಟು ಹತ್ತು ದಿನಗಳಾಗುತ್ತವೆ. ನಿಶನ ವ್ರತ ಕೈಗೊಳ್ಳುವುದಿಲ್ಲವೆಂದು ನೀನು ನನಗೆ ವಚನಕೊಡಬೇಕು."

"ಪಾಪ ಪರಿಹಾರವಾದಲ್ಲದೆ ನಾನು ಹೇಗೆ ಅನ್ನ ತಿನ್ನಲಿ – ದಯೆ ಯಿಟ್ಟು ನನ್ನನ್ನು ಬಲಾತ್ಕರಿಸಬೇಡಿ. ಗುರುರಾಜರ ಪಾದದರ್ಶನ ಮಾಡಿ ದಲ್ಲದೆ ನಾನು ಯಾವ ಆಹಾರವನ್ನೂ ಸ್ವೀಕರಿಸಲಾರೆ."

ಪತ್ನಿಯನ್ನೊಪ್ಪಿಸುವುದು ಸುಲಭಸಾಧ್ಯವಲ್ಲವೆಂದು ತಿಳಿದ ನರಸಿಂಹ

ನಾಯಕರು, ಕೂಡಲೆ ಮನವಿಪತ್ರ ಬರೆದು, ಅರವೀಟಿ ಬುಕ್ಕನಾಯಕರನ್ನು ಕರೆದು ಅವರ ಕೈಯಲ್ಲಿ ಪತ್ರವಿಟ್ಟು, ಸಂದರ್ಭ ವಿವರಿಸಿ,

"ಶ್ರೀರಂಗಮಾಂಬೆಯವರ ಪ್ರಾಣ ನೀವೇ ಕಾಪಾಡಬೇಕು. ಶರ ವೇಗದಲ್ಲಿ ಮುಳುಬಾಗಿಲಿಗೆ ಹೋಗಿ, ಗುರುರಾಜರಿಗೆ ಎಲ್ಲ ವಿಷಯಗಳನ್ನೂ ನಿವೇದಿಸಿ, ಕೂಡಲೆ ಕರೆದುಕೊಂಡು ಬನ್ನಿ. ಅವರು ಬರುವುದು ವಿಳಂಬ ವಾದರೆ ಶ್ರೀರಂಗಮಾಂಬೆಯವರು............"

ಬುಕ್ಕನಾಯಕರು, ವೀರನ ಕಣ್ಣಿನಿಂದ ಮಿಡಿದ ಹನಿಕಂಡು,

"ಚಿಂತಿಸಬೇಡಿ ಪ್ರಭೂ – ಮೂರು ನಾಲ್ಕು ದಿನಗಳೊಳಗಾಗಿ ನಾನು ಶ್ರೀಶ್ರೀಗಳವರೊಂದಿಗೆ ಹಿಂದಿರುಗುತ್ತೇನೆ."

ಎಂದು ಆಶ್ವಾಸನವಿತ್ತು, ಕೂಡಲೆ ಪ್ರಯಾಣಸನ್ನದ್ಧರಾದರು.

# ೭

ನರಸಿಂಹನಾಯಕರು ಮುಳುಬಾಗಿಲು ಪ್ರಾಂತ್ಯಾಧಿಕಾರಿಗಳಾಗಿದ್ದಾಗಲೇ ಅವರಿಗೆ ಮುಳುಬಾಗಿಲು ಮಠಾಧಿಪತಿಗಳೂ, ಅಪರೋಕ್ಷಜ್ಞಾನಿಗಳೂ ಆದ ಶ್ರೀಶ್ರೀಪಾದರಾಜರ ಪರಿಚಯವಾಯಿತು. ಯತಿಶ್ರೇಷ್ಠರ ಅಮಾನುಷಜೀವನ, ಅಮೋಘಪಾಂಡಿತ್ಯ, ದೈವೋಪಮವಾದ ತೇಜಸ್ಸನ್ನು ಕಂಡು ನರಸಿಂಹನಾಯಕರು, ಅವರ ಧರ್ಮಪತ್ನಿ ಶ್ರೀರಂಗಮಾಂಬಾ, ಅವರ ಶಿಷ್ಯವೃತ್ತಿಯನ್ನು ಕೈಗೊಂಡರು.

ಶ್ರೀಪಾದರಾಜರ ಬಗ್ಗೆ ನಾಯಕ ದಂಪತಿಗಳು ಅನ್ಯಾದೃಶ ಭಕ್ತಿ ಬೆಳೆಯಲು ಒಂದು ಕಾರಣ ಒದಗಿ ಬಂದಿತು. ನಾಯಕರ ಹಿರಿಯ ಮಗ, ಚಿನ್ನ ವೆಂಕಟ ಬಾಲಗ್ರಹಕ್ಕೆ ತುತ್ತಾದ. ಔಷಧೋಪಚಾರಗಳು ನಿಷ್ಪ್ರಯೋಜಕವಾದವು. ಅವನು ಅಕಾಲಮೃತ್ಯುವಿಗೆ ಈಡಾದ. ನಾಯಕರಿಗೂ, ಶ್ರೀರಂಗಮಾಂಬೆಗೂ ಜೀವದ ಮೇಲೇ ಜಿಹಾಸೆ ಹುಟ್ಟಿತು. ದುಃಖದಿಂದ ಒಂದೇ ಸಮನಾಗಿ ಕೊರಗುತ್ತಿದ್ದ ದಂಪತಿಗಳನ್ನು ಶ್ರೀಪಾದರಾಜರು ಹಲವು ಬಗೆಯಲ್ಲಿ ಸಂತೈಸಿ, ಅವರಿಗೆ ಧೈರ್ಯಸ್ಥೈರ್ಯಗಳನ್ನಿತ್ತರು. ನಿರ್ಭರ ದುಃಖಕಾಲದಲ್ಲಿ ಶ್ರೀಪಾದರಾಜರು ತೋರಿದ ದಿವ್ಯಾನುಕಂಪ, ನಾಯಕ ದಂಪತಿಗಳಿಗೆ ಮನಃಶಾಂತಿಯನ್ನನುಗ್ರಹಿಸಿತು. ನಾಯಕರೂ, ಶ್ರೀರಂಗಮಾಂಬೆ ಶ್ರೀಪಾದರಾಜರನ್ನೇ ಗುರುಗಳನ್ನಾಗಿ ಪರಿಗ್ರಹಿಸಿ, ಅವರ ಬಗ್ಗೆ ಪರಮಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು.

ನಾಯಕರ ಅಂತಃಸ್ಸತ್ವವನ್ನರಿತಿದ್ದ ಅಪರೋಕ್ಷಜ್ಞಾನಿಗಳಾದ ಶ್ರೀಪಾದರಾಜರು, ಅವರಿಗೆ ಸೂಕ್ತ ಬುದ್ಧಿವಾದ ಹೇಳುತ್ತ ಅವರ ಬಗ್ಗೆ ಅವ್ಯಾಜ ಕರುಣೆ ತಳೆದಿದ್ದರು.

ನಾಯಕರನ್ನು ಕಂಡಕೂಡಲೆ ಗುರುಗಳ ಮುಖಕಮಲ ಅರಳುತ್ತಿತ್ತು – ಮನಸ್ಸು ಸುಪ್ರಸನ್ನವಾಗುತ್ತಿತ್ತು. ಕೈಚಾಚಿ ' ಬಾ – ನನ್ನ ಮೋಹನ ಮುರಾರಿ ' ಎಂದು ಪ್ರೀತಿಯಿಂದ ಕರೆಯುತ್ತಿದ್ದರು.

ಶ್ರೀಪಾದರಾಜರ ಪೂರ್ವಾಶ್ರಮದ ತಂದೆ, ತಾಯಿ – ಶೇಷಗಿರಿ ಆಚಾರ್ಯ, ಗಿರಿಯಮ್ಮ ಚನ್ನಪಟ್ಟಣ ತಾಲ್ಲೂಕಿನ ಅಬ್ಬೂರು ಗ್ರಾಮದವರು. ಕಡುಬಡವನಾದ ಶೇಷಗಿರಿ ಆಚಾರ್ಯ ಒಂದು ಸಣ್ಣ ತೆಂಗು, ಬಾಳೆಯ ತೋಟ ಮಾಡಿಕೊಂಡು ಉದರಂಭರಣಕ್ಕೆ ಸಾಕಾಗುವಷ್ಟು ಗೋಸಂಪತ್ತಿಯನ್ನು ಬೆಳೆಸಿಕೊಂಡು ಸಾತ್ವಿಕ ಜೀವನ ನಡೆಸುತ್ತಿದ್ದ. ಅವನ ಏಕಮಾತ್ರ ಪುತ್ರನೇ ಲಕ್ಷ್ಮೀನಾರಾಯಣ.

ತಂದೆಯ ಬಳಿಯಲ್ಲಿಯೇ ಅಕ್ಷರಾಭ್ಯಾಸ ಮಾಡುತ್ತಿದ್ದ ಲಕ್ಷ್ಮೀನಾರಾಯಣನಿಗೆ ದನಗಳನ್ನು ಗುಡ್ಡಗಳಲ್ಲಿ ಮೇಯಿಸಿಕೊಂಡು ಬರುವ ಕಾಯಕ ವಿಧಿಸಲಾಗಿತ್ತು.

ಇತರ ಗೋವಳರೊಂದಿಗೆ ನಿತ್ಯ ದನಮೇಯಿಸುವುದಕ್ಕೆ ಹೋಗುತ್ತಿದ್ದ ಲಕ್ಷ್ಮೀನಾರಾಯಣ ಸುತ್ತಮುತ್ತಲಿನ ನಿಸರ್ಗ ಸೌಂದರ್ಯ ಕಂಡು ಭಾವ ಪರವಶನಾಗುತ್ತಿದ್ದ. ಭಾಗವತರ ಹಿರಿಯ ಗೋಪಾಲ ಶ್ರೀಕೃಷ್ಣನನ್ನು ಸ್ಮರಿಸಿಕೊಳ್ಳುತ್ತಾ, ಆ ಗುಡ್ಡಗಾಡೇ ಯಮುನಾ ತೀರವೆಂದೂ, ತನ್ನ ಸಂಗಡಿಗರಾದ ಗೋವಳರೇ ಶ್ರೀಕೃಷ್ಣನ ಸಂಗಡಿಗರೆಂದೂ, ತಾನೇ ವಿಜಯನೆಂದೂ ಕನಸು ಕಾಣುತ್ತಿದ್ದ.

ಭಾವಪರವಶನಾಗಿ ಲಕ್ಷ್ಮೀನಾರಾಯಣ ಆಡುತ್ತಿದ್ದ ಮಾತುಗಳನ್ನು ಕೇಳಿ ವಿಸ್ಮಯಗೊಳ್ಳುತ್ತಿದ್ದ ಗೋವಳರು ಗಿರಿಯಮ್ಮನಿಗೆ ಎಲ್ಲವನ್ನೂ ವರದಿ ಒಪ್ಪಿಸುತ್ತಿದ್ದರು. ತನ್ನ ಕಣ್ಮಣಿಯಾದ ಲಕ್ಷ್ಮೀನಾರಾಯಣ, ಪ್ರಾಪಂಚಿಕ ಜೀವನವನ್ನು ಕಡೆಗಾಣಿಸಿ, ಎಲ್ಲಿ ಸನ್ಯಾಸ ಸ್ವೀಕರಿಸಿಬಿಡುವನೋ ಎಂದು ಗಿರಿಯಮ್ಮ ಭಯಗ್ರಸ್ತಳಾದಳು.

ಒಂದು ದಿನ ಶ್ರೀರಂಗಪಟ್ಟಣದಿಂದ ಹೊರಟಿದ್ದ ಶ್ರೀಸ್ವರ್ಣವರ್ಣ ತೀರ್ಥಸ್ವಾಮಿಗಳ ಮೇನೆಯು ಗುಡ್ಡಗಾಡಿನ ಕಾಲುದಾರಿಯಲ್ಲಿ ಸಾಗಿಬರುತ್ತಿತ್ತು. ಸಂಧ್ಯಾಕಾಲ ಕಳೆಯುತ್ತ ಬಂದು ಮುಸುಕು ಮುಸುಕು ಕತ್ತಲೆ ಇಣಿಕಿ ಹಾಕುತ್ತಿತ್ತು. ಅಬ್ಬೂರಿನ ದಾರಿ ತಿಳಿಯದೆ ಮೇನೆ ಹೊತ್ತಿದ್ದವರು ಕಳವಳಕ್ಕೀಡಾಗಲು, ಶ್ರೀಶ್ರೀಗಳವರು ದನಮೇಯಿಸುತ್ತಿದ್ದ ಗೋವಳ ಬಾಲಕರನ್ನು ಹತ್ತಿರ ಕರೆದರು. ಸ್ವಾಮಿಗಳು, ಅವರ ಪರಿವಾರ, ಮೇನೆ ಹೊತ್ತಿದ್ದ ಕಟ್ಟಾಳುಗಳನ್ನು ಕಂಡ ಬಾಲಕರು ಭಯಪಟ್ಟು ಓಡಿಹೋಗಲು,

ಲಕ್ಷ್ಮೀನಾರಾಯಣನೊಬ್ಬನೇ ಸ್ವಾಮಿಗಳ ಬಳಿಗೆ ಧೈರ್ಯವಾಗಿ ಬಂದು, ನಮಸ್ಕರಿಸಿದ.

" ನಿನ್ನ ಹೆಸರೇನು ಮಗು ?"

" ಲಕ್ಷ್ಮೀನಾರಾಯಣ."

" ಯಾರ ಮಗ ನೀನು ?"

" ಅಬ್ಬೂರಿನ ಶೇಷಗಿರಿ ಆಚಾರ್ಯರ ಮಗ."

" ನಾವು ಅಬ್ಬೂರಿಗೆ ಹೊರಟಿದ್ದೇವೆ. ನಮ್ಮೊಂದಿಗೆ ಬಂದು ದಾರಿ ತೋರಿಸುತ್ತೀಯಾ ಮಗು – ಬಾ, ಮೇನೆಯಲ್ಲಿಯೇ ಕುಳಿತುಕೊ."

" ಅಬ್ಬೂರಿಗೆ ದಾರಿ ತೋರಿಸುತ್ತೇನೆ – ಮೇನೆಯಲ್ಲಿ ಕೂಡುವುದಿಲ್ಲ. ಅಗೋ ಅಲ್ಲಿ – ಹೊಗೆ ಬರುತ್ತಿದೆಯಲ್ಲಾ – ಅದೇ ಅಬ್ಬೂರು."

" ಏಕೆ ?"

" ನಮ್ಮ ದೊಡ್ಡಪ್ಪನ ಮಗ ಒಬ್ಬ ಸ್ವಾಮಿಯಾದ. ನಾನೂ ಸ್ವಾಮಿಗಳ ಸಹವಾಸಮಾಡಿ ಸನ್ಯಾಸಿಯಾಗುತ್ತೇನೆಂದು ನಮ್ಮಮ್ಮ ಹೆದರಿದ್ದಾಳೆ. ನಿಮ್ಮೊಂದಿಗೆ ನಾನು ಬಂದರೆ ಅವಳು ಕೋಪ ಮಾಡಿಕೊಳ್ಳುತ್ತಾಳೆ."

ಶ್ರೀಶ್ರೀಗಳವರು ನಸುನಕ್ಕು,

" ಸನ್ಯಾಸಿಯಾಗಲು ನಿನಗಿಷ್ಟವಿಲ್ಲವೇ ?"

ಲಕ್ಷ್ಮೀನಾರಾಯಣ ಕ್ಷಣಕಾಲ ಯೋಚಿಸಿ,

" ಇದೆ – ಆದರೇನು ಮಾಡಲಿ ಸ್ವಾಮಿಗಳೇ – ನಮ್ಮಮ್ಮನಿಗೆ ನನ್ನನ್ನು ಕಂಡರೆ ತುಂಬ ಪ್ರೀತಿ. ಅವಳ ಕಣ್ಣಲ್ಲಿ ನೀರು ಬಂದರೆ ನನ್ನ ಕರುಳು ಕಿತ್ತು ಬರುತ್ತದೆ. ಅವಳು ಬೇಡವೆಂದದ್ದನ್ನು ನಾನು ಹೇಗೆ ಮಾಡಲಿ."

ಬಾಲಕನ ಸರಳ ಸೌಜನ್ಯಭರಿತ ಉತ್ತರ ಕೇಳಿದ ಶ್ರೀಗಳವರು ಆನಂದ ತುಂದಿಲರಾಗಿ, ಅವನನ್ನು ಹತ್ತಿರ ಕರೆದು, ತಲೆ ನೇವರಿಸಿ, ಅಕ್ಷತೆಯ ಕಾಳನ್ನು ಹಾಕಿ,

" ಒಳ್ಳೆಯದು ಲಕ್ಷ್ಮೀನಾರಾಯಣ – ನೀನು ಮನೆಗೆ ಹೋಗಪ್ಪಾ " ಎಂದರು.

ಬೋಯಿಗಳು ಮೇನೆ ಹೊತ್ತುಕೊಂಡು, ಶ್ರೀಶ್ರೀಗಳವರನ್ನು ಶ್ರೀ ಪುರುಷೋತ್ತಮರ ಮಠಕ್ಕೆ ಕರೆತಂದರು.

ಶ್ರೀಸುವರ್ಣತೀರ್ಥರನ್ನು ಹಾರ್ದಿಕವಾಗಿ ಸ್ವಾಗತಿಸಿ, ಆಲಂಗಿಸಿದ ಶ್ರೀ ಪುರುಷೋತ್ತಮರು,

" ಇದೇ ಸುದಿನ – ತಮ್ಮ ಪಾದಧೂಳಿಯಿಂದ ನಮ್ಮ ಮಠ ಪವಿತ್ರ ವಾಯಿತು." ಎಂದರು.

ಶ್ರೀಪುರುಷೋತ್ತಮರು ತಮ್ಮ ಪ್ರಿಯ ಶಿಷ್ಯ ಬ್ರಹ್ಮಣ್ಯತೀರ್ಥನನ್ನೇ ಶ್ರೀಶ್ರೀಗಳವರ ಕೈಂಕರ್ಯಕ್ಕೆ ನೇಮಿಸಿದರು.

ಸಾಕ್ಷಾತ್ ಶುಕಮುನಿಯಂತೆ ವಿರಾಜಿಸುತ್ತಿದ್ದ ಬಾಲಯತಿ ಬ್ರಹ್ಮಣ್ಯ ನನ್ನು ನೋಡಿ ಸುಪ್ರೀತರಾದ ಸುವರ್ಣತೀರ್ಥರು,

" ನಮಗೂ ಇಂಥ ಒಬ್ಬ ಶಿಷ್ಯ ಸಿಕ್ಕಿದ್ದರೆ ಚೆನ್ನಾಗಿತ್ತು " ಎಂದರು.

" ಏಕಾಗಬಾರದು. ಶ್ರೀಹರಿಕೃಪೆಯಿದ್ದರೆ ಯಾವದು ಅಸಾಧ್ಯ "

ಎಂದು ಶ್ರೀಪುರುಷೋತ್ತಮರು ಉತ್ತರವಿತ್ತರು.

" ನಾವು ಇಲ್ಲಿಗೆ ಬರುವಾಗ, ಬೋಯಿಗಳು ಹಾದಿ ತಿಳಿಯದೆ ಕಳವಳ ಗೊಂಡರು. ಆಗ ನಾವು ದನಗಾಹಿ ಬಾಲಕನೊಬ್ಬನನ್ನು ಕರೆದು, ದಾರಿ ತೋರೆಂದೆವು. ಅವನು ದಾರಿ ತೋರಿಸಿದ. ಆ ಹುಡುಗನನ್ನು ನೋಡಿದಾ ರಭ್ಯ, ನನ್ನ ಮನಸ್ಸು ಅವನಲ್ಲಿ ನೆಟ್ಟಿದೆ. ಭಕ್ತಶಿರೋಮಣಿ ಧೃವನ ನೆನವು ಪದೇ ಪದೇ ಬರುತ್ತಿದೆ."

" ಅವನ ಹೆಸರು ಗೊತ್ತಾಯಿತೇ ?"

" ಲಕ್ಷ್ಮೀನಾರಾಯಣನಂತೆ. ಇದೇ ಊರಿನ ಶೇಷಗಿರಿ ಆಚಾರ್ಯನ ಮಗನಂತೆ ?"

" ಶೇಷಗಿರಿ ನಮ್ಮ ಶಿಷ್ಯ ಕೋಟಿಗೆ ಸೇರಿದವನು – ಅವನನ್ನೂ ಲಕ್ಷ್ಮೀ ನಾರಾಯಣನನ್ನೂ ಬರಮಾಡುತ್ತೇನೆ."

ಶ್ರೀಶ್ರೀಗಳವರಿಂದ ಬಂದ ಕರೆ, ಗಿರಿಯಮ್ಮನ ಹೃದಯಕ್ಕೆ ಶಲ್ಯಪ್ರಾಯ ವಾಯಿತು.

ಮಗನನ್ನು ಗಟ್ಟಿಯಾಗಿ ಅಪ್ಪಿಕೊಂಡ ಗಿರಿಯಮ್ಮ, ದುಃಖಿ ಸುತ್ತಾ,

" ಇರುವ ಒಬ್ಬ ಮಗನನ್ನು ನಾನು ಸನ್ಯಾಸಿಗಳ ವಶಪಡಿಸಲಾರೆ – ನಾವು ಮಠಕ್ಕೆ ಬರುವುದಿಲ್ಲವೆಂದು ಸ್ವಾಮಿಗಳಿಗೆ ಹೇಳಿ ಕಳಿಸಿಬಿಡಿ" ಎಂದಳು.

ಶೇಷಗಿರಿ ಆಚಾರ್ಯನಿಗೆ ಧರ್ಮಸಂಕಟ ಒದಗಿತು.

ಅತ್ತ ಗುರ್ವಾಜ್ಞೆ !

ಇತ್ತ ಸಹಧರ್ಮಿಣಿಯ ಆರ್ತಾಲಾಪ !

ಉಭಯರನ್ನು ಸಮಾಧಾನ ಪಡಿಸುವುದು ಹೇಗೆಂದು ಯೋಚಿಸುತ್ತಾ ಶೇಷಗಿರಿ ಆಚಾರ್ಯ,

" ಶ್ರೀಗುರುಗಳು ದೊಡ್ಡವರು – ನಾರಾಯಣ ಸಮಾನರು – ಅವರ ಆಜ್ಞೆಯನ್ನುಲ್ಲಂಘಿಸುವುದು ಶ್ರೇಯಸ್ಕರವಲ್ಲ. ಅವರನ್ನು ಹೋಗಿ ನೋಡೋಣ – ನಿನ್ನ ಮನಸ್ಸಿನಲ್ಲಿ ಏನಿದೆ ನೀನೇ ಹೇಳು. ನೀನು ಒಪ್ಪದಿದ್ದರೆ ಅವರು ನಿನ್ನ ಮಗನನ್ನು ಕಸುಗೊಳ್ಳುವುದಿಲ್ಲ. ಗುರುಭರ್ತ್ಸನೆ ಮಾಡಿ ನಾವು ಏಳೇಳು ಜನ್ಮಗಳ ಪಾಪಗಳಿಸುವುದು ಬೇಡ "

ಎಂದು ಹೆಂಡತಿಯನ್ನೊಪ್ಪಿಸಿ, ಅವಳನ್ನೂ ಮಗನನ್ನೂ ಜತೆಯಲ್ಲಿ ಕರೆದುಕೊಂಡು ಗುರುಮನೆಗೆ ಬಂದ.

ಲಕ್ಷ್ಮೀನಾರಾಯಣನನ್ನು ನೋಡಿದ ಕೂಡಲೆ ಸುವರ್ಣತೀರ್ಥರು,

" ನಮಗೆ ಮಾರ್ಗದರ್ಶನ ಮಾಡಿದ ಬಾಲಕ ಇವನೇ ನೋಡಿ" ಎಂದರು.

ಶ್ರೀಪುರುಷೋತ್ತಮರು ಶೇಷಗಿರಿಯನ್ನು ದಿಟ್ಟಿಸಿನೋಡಿ,

" ಲಕ್ಷ್ಮೀನಾರಾಯಣನನ್ನು ದನಗಾಹಿಮಾಡುವೆಯೋ, ಅವನಿಗೆ ವಿದ್ಯಾಬುದ್ಧಿ ಕಲಿಸುವೆಯೋ ?"

ಮ್ಲಾನವದನನಾದ ಶೇಷಗಿರಿ ಆಚಾರ್ಯ,

" ಶ್ರೀಗುರುಚಿತ್ತಕ್ಕೆ ವೇದ್ಯವಾಗದಿರುವುದೇನಿದೆ ? ನನ್ನ ಮಗ ಅಪಾರ ಪಾಂಡಿತ್ಯಗಳಿಸಿ ದ್ವಿತೀಯ ಜಯತೀರ್ಥನಾಗಬೇಕೆಂದು ನನ್ನ ಇಚ್ಛೆ – ಶ್ರೀಹರಿಗದು ಬೇಕಿಲ್ಲ. ಉದರಂಭರಣವೇ ನನಗೆ ಮಹಾ ಸಮಸ್ಯೆಯಾಗಿರುವಾಗ ನಾನೇನು ಮಾಡಲಿ."

" ಲಕ್ಷ್ಮೀನಾರಾಯಣನನ್ನು ನಮ್ಮ ವಶಕ್ಕೆ ಒಪ್ಪಿಸು. ಅವನು ನಮ್ಮ ಮಠದಲ್ಲಿದ್ದುಕೊಂಡು ವಿದ್ಯಾಪಾರಂಗತನಾಗಲಿ. ಮಗನನ್ನು ಬಿಟ್ಟಿರಲು ನಿನಗೂ ಗಿರಿಯಮ್ಮನಿಗೂ ಅಸಾಧ್ಯವೆನಿಸಿದರೆ ನೀವೂ ಬಂದು ಮಠದಲ್ಲಿರಿ."

ಕಂಬನಿಗರೆಯುತ್ತಿದ್ದ ಗಿರಿಯಮ್ಮ ಶ್ರೀಶ್ರೀಗಳವರ ಮುಂದೆ ಅಂಜಲಿ ಬದ್ಧಳಾಗಿ ನಿಂತು,

"ತಮ್ಮ ಆಶ್ರಯದಲ್ಲಿ ನಾವು ಸುಖವಾಗಿಯೇ ಇರುತ್ತೇವೆ. ಲಕ್ಷ್ಮೀ ನಾರಾಯಣನ ಭವಿಷ್ಯವೂ ರೂಪುಗೊಳ್ಳುತ್ತದೆ – ಆ ಬಗ್ಗೆ ನನಗೆ ತಿಲಮಾತ್ರ ವಾದ ಸಂಶಯವೂ ಇಲ್ಲ. ಆದರೆ........"

"ಹೇಳು ಗಿರಿಯಮ್ಮ – ಸಂಕೋಚಪಟ್ಟುಕೊಳ್ಳಬೇಡ."

"ನಮ್ಮ ವಂಶಕ್ಕಿರುವವನು ಒಬ್ಬನೇ ಮಗ – ಅವನೂ ಸನ್ಯಾಸಿಯಾಗಿ ಬಿಟ್ಟರೆ............"

ಸುವರ್ಣತೀರ್ಥರು, ತಮ್ಮ ಗೈರಿಕಾವಸನವನ್ನು ಗಿರಿಯಮ್ಮನ ಮುಂದೆ ಹಿಡಿದು,

"ತಾಯೀ, ಗಿರಿಯಮ್ಮ – ನೀನು ಪುತ್ರಭಿಕ್ಷನನ್ನು ಕೇಳುತ್ತಿರುವಂತೆ, ನಾನೂ ಕೇಳುತ್ತಿದ್ದೇನೆ. ನಿನ್ನ ವಂಶಕ್ಕೆ ಉತ್ತರಾಧಿಕಾರಿಯಿರಬೇಕೆಂದು ನೀನು ಹೇಗೆ ಬಯಸುವೆಯೋ, ಹಾಗೇ ನಾನೂ ಬಯಸುತ್ತಿದ್ದೇನೆ. ನಿನ್ನ ಉತ್ತರಾಧಿಕಾರಿಯಿಂದ ನಿನ್ನ ವಂಶ ಉದ್ಧಾರವಾಗುತ್ತದೆ ತಾಯಿ; ನನ್ನ ಉತ್ತರಾಧಿಕಾರಿಯಿಂದ ದೇಶ ಉದ್ಧಾರವಾಗುತ್ತದೆ; ಧರ್ಮ ಉದ್ಧಾರವಾಗು ತ್ತದೆ. ಲಕ್ಷ್ಮೀನಾರಾಯಣನ ಮುಖ ಕಂಡ ಕೂಡಲೆ 'ಇದೊಂದು ಅಗಾಧ ಚೇತನ. ಶಿಲೆಯೊಳಗೆ ಪಾವಕ ಅಡಗಿರುವಂತೆ ಹರಿಶಕ್ತಿ ಈ ಬಾಲಕನಲ್ಲಿ ಅಂತರ್ಗತವಾಗಿದೆ. ಇವನಿಂದ ಲೋಕ ಕಲ್ಯಾಣವಾಗುತ್ತದೆ' ಎಂದು ನನಗೆ ಭಾಸವಾಯಿತು. – ಆದರೆ ಎಲ್ಲಕ್ಕಿಂತ ತಾಯಿ ದೊಡ್ಡವಳು. ತಾಯಿಯ ಮನಸ್ಸಿಗೆ ವ್ಯಥೆಯನ್ನುಂಟುಮಾಡಿ, ಲಕ್ಷ್ಮೀನಾರಾಯಣನನ್ನು ಕರೆದೊಯ್ಯಲು ನನಗಿಚ್ಛೆಯಿಲ್ಲ. ನೀನೇ ಸ್ವಸಂತೋಷದಿಂದ ಲಕ್ಷ್ಮೀನಾರಾಯಣನನ್ನು ನನ್ನ ಮಡಿಲಿಗೆ ಹಾಕುವುದಾದರೆ ಮಹೋಪಕಾರವಾಗುತ್ತದೆ."

ಅನಂತ ವಿಚಾರಗಳ ಸುಳಿಗೆ ಸಿಕ್ಕಿದ ಗಿರಿಯಮ್ಮ ಅವನತಮುಖಿಯಾಗಿ ಕುಳಿತಳು.

ಉಭಯ ಸ್ವಾಮಿಗಳು, ಶೇಷಗಿರಿ ಆಚಾರ್ಯ, ಲಕ್ಷ್ಮೀನಾರಾ ಯಣ, ಮಠದ ಭಕ್ತಾದಿಗಳು ಗಿರಿಯಮ್ಮನನ್ನೇ ಎವೆಯಿಕ್ಕದೆ ನೋಡು ತ್ತಿದ್ದರು.

ಗಿರಿಯಮ್ಮನ ಮುಖದಮೇಲೆ ಬೆಳಕು ಬಿತ್ತರಿಸಿದಂತೆ ನಗೆ ಮೂಡಿತು. ವೃದ್ಧಕಂಠದಿಂದವಳು,

"ಶ್ರೀಕೃಷ್ಣಾರ್ಪಣಮಸ್ತು" ಎಂದಳು.

ಆನಂದಪರವಶರಾದ ಶ್ರೀ ಸ್ವರ್ಣವರ್ಣರು,

"ಮಹಾಮಂಗಳಾರತಿಯಾಗಲಿ – ವೇದಾಂತಾಕಾಶದಲ್ಲಿ ಇಂದು ದ್ವೈತಭಾನು ಉದಯಿಸಿದ್ದಾನೆ" ಎಂದರು.

ಕೆಲ ದಿನಗಳಾನಂತರ ಸ್ವರ್ಣವರ್ಣರು ತಮ್ಮ ಶಿಷ್ಯ ಲಕ್ಷ್ಮೀನಾರಾಯಣನನ್ನು ಪುರುಷೋತ್ತಮರ ವಶಕ್ಕೆ ಒಪ್ಪಿಸಿ, ಪ್ರಯಾಣ ಬೆಳೆಸಿದರು.

ಲಕ್ಷ್ಮೀನಾರಾಯಣನ ತಾಯಿ ತಂದೆಗಳು, ತೋಟವನ್ನು ಗುತ್ತಿಗೆಗೆ ಕೊಟ್ಟು, ಪುರುಷೋತ್ತಮ ತೀರ್ಥರ ಮಠದಲ್ಲಿಯೇ ಮಗನೊಂದಿಗೆ ವಾಸಿಸುತ್ತಿದ್ದರು.

ಪುರುಷೋತ್ತಮತೀರ್ಥರ ಶಿಷ್ಯ ವೃತ್ತಿಯಿಂದ ಕಾಲಾನುಕ್ರಮದಲ್ಲಿ ಲಕ್ಷ್ಮೀನಾರಾಯಣ ಅದ್ವಿತೀಯ ಪಂಡಿತನೆನಿಸಿಕೊಂಡ.

ಶ್ರೀರಂಗ ಕ್ಷೇತ್ರದಲ್ಲಿದ್ದ ಸ್ವರ್ಣವರ್ಣರಿಗೆ ವೃದ್ಧಾಪ್ಯ ಸಮೀಪಿಸಲು, ಲಕ್ಷ್ಮೀನಾರಾಯಣನನ್ನು ಬರಮಾಡಿಕೊಂಡು, ಅವನಿಗೆ ವಿಧ್ಯುಕ್ತವಾಗಿ ಸನ್ಯಾಸ ಅನುಗ್ರಹಿಸಿ '**ಲಕ್ಷ್ಮೀನಾರಾಯಣಯೋಗಿ**' ಯೆಂದು ಅಭಿಧಾನವಿತ್ತರು.

ಪೀಠಾರೋಹಣ ಮಾಡಿದ ಕೆಲವು ಕಾಲದ ಮೇಲೆ ಲಕ್ಷ್ಮೀನಾರಾಯಣಯೋಗಿಗಳು, ರಾಘವೇಂದ್ರಮಠದ ಪೂರ್ವಪೀಠಿಗೆಯ ವಿಬುಧೇಂದ್ರ ಯತಿಗಳೊಡನೆ ಧರ್ಮದಿಗ್ವಿಜಯಕ್ಕೆ ಹೊರಟರು.

ಉಭಯಯತಿಗಳೂ ಅನೇಕ ಪುಣ್ಯಕ್ಷೇತ್ರಗಳನ್ನು ಸಂಚರಿಸಿಕೊಂಡು, ಪಾಷಂಡಿಗಳನ್ನು ನಿಗ್ರಹಿಸಿ, ದೇಶಾದ್ಯಂತವೂ ಹರಿಭಕ್ತಿಸುಧೆಯನ್ನು ಹಂಚಿ, ಚಾತುರ್ಮಾಸಕ್ಕಾಗಿ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನಲ್ಲಿರುವ ಕೊಪ್ಪರವೆಂಬ ಗ್ರಾಮಕ್ಕೆ ಬಂದು ಬೀಡುಬಿಟ್ಟರು. ಅದೇ ಕಾಲಕೆ ಉತ್ತರಾದಿ ಮಠದ ಶ್ರೀ ರಘುನಾಥ ತೀರ್ಥರು ಕೊಪ್ಪರಕ್ಕೆ ಬಂದರು.

ಶ್ರೀ ರಘುನಾಥರು ಲಕ್ಷ್ಮೀನಾರಾಯಣ ಯೋಗಿಗಳ ಪಾಂಡಿತ್ಯ ಪರೀಕ್ಷೆ ಮಾಡಲೆಚ್ಚಿಸಿ ಅವರಿಗೆ ನ್ಯಾಯಸುಧೆಯ ಅತ್ಯಂತ ಕಠಿಣವಾದೊಂದು

ಸೂತ್ರವನ್ನು ಸೂಚಿಸಿ, ವಿಮರ್ಶೆ ಬಯಸಿದರು. ಲಕ್ಷ್ಮೀನಾರಾಯಣರು ಆ ಸೂತ್ರಾರ್ಥವನ್ನು ವಿವಿಧ ದೃಷ್ಟಿಕೋನಗಳಿಂದ ವಿವರಿಸಿದುದಲ್ಲದೆ, ಇಡಿಯ ಸುಧಾಗ್ರಂಥವನ್ನೇ ವಿಮರ್ಶೆ ಮಾಡಿದರು.

ಲಕ್ಷ್ಮೀನಾರಾಯಣರ ವೈದುಷ್ಯಕ್ಕೆ ನಿಬ್ಬೆರಗಾದ ರಘುನಾಥರು,

"ನೀವು ಜಯತೀರ್ಥರ ಪುನರವತಾರ ಎಂದು ನನಗನಿಸುತ್ತಿದೆ. ಸುಧಾಗ್ರಂಥಕ್ಕೆ ಇಷ್ಟು ಸರಳವಾಗಿ, ಸುಂದರವಾಗಿ, ವಿದ್ವತ್ಪೂರ್ಣವಾಗಿ ವ್ಯಾಖ್ಯೆ ಮಾಡುವುದು ಪೂರ್ವಾರ್ಜಿತ ಪುಣ್ಯವಿಶೇಷ. ಈಗ್ಗೆ ಮೂರು ಶತಮಾನಗಳ ಹಿಂದೆ ಅವತರಿಸಿ ದ್ವೈತ ಸಿದ್ಧಾಂತವನ್ನು ಪ್ರತಿಷ್ಠಾಪಿಸಿದ ಸದ್ಗುರು ಶ್ರೀ ಆನಂದ ತೀರ್ಥರ ಮಹದ್ಕಾರ್ಯವನ್ನು ಮುಂದುವರಿಸಿ ಇತೋಪ್ಯತಿಶಯವಾಗಿ ಬೆಳಗುವಂತೆ ಮಾಡುವ ಹೊಣೆಗಾರಿಕೆ ನಿಮ್ಮದಾಗಿದೆ."

ಎಂದು ಪ್ರಶಂಸಿದರು.

ಪಾಂಡಿತ್ಯವೊಂದರಲ್ಲಿಯೇ ಅಲ್ಲದೆ, ವಿನಯ, ಸೌಜನ್ಯ, ಗುರುಭಕ್ತಿ, ಸಹೃದಯತೆಗಳಲ್ಲಿಯೂ ಹಿರಿಯರೆನಿಸಿದ್ದ ಲಕ್ಷ್ಮೀನಾರಾಯಣ ಯೋಗಿಗಳು, ಕೈಜೋಡಿಸಿ,

"ಯತಿಸಾರ್ವಭೌಮಾ, ನಾನೆಷ್ಟಾದರೂ ಬಾಲಯತಿ. ನನ್ನ ಗುರುಸ್ವಾಮಿ ಹೇಳಿಕೊಟ್ಟದ್ದನ್ನು ಶುಕನಂತೆ ಒಪ್ಪಿಸಿದೆ ಅಷ್ಟೆ. ಪಾಂಡಿತ್ಯ, ತಪಸ್ಸು ಎರಡರಲ್ಲಿಯೂ ತಾವು ದೊಡ್ಡವರು; ಮಹಾಸಂಸ್ಥಾನಾಧಿಪತಿಗಳು; ಶ್ರೀಪಾದಂಗಳ:–ನನ್ನನ್ನು ತಾವು ಆಶೀರ್ವದಿಸಬೇಕಲ್ಲದೆ ಪ್ರಶಂಸಿಸಬಾರದು."

ಬಾಲಯತಿಯ ಮೃದುಮಧುರ ವಿನಯೋಕ್ತಿಯನ್ನು ಕೇಳಿ ಸುಪ್ರೀತರಾದ ಹಿರಿಯ ಗುರುಗಳು,

"ನಾವು ಬರೀ ಶ್ರೀಪಾದಂಗಳು – ನೀವು ಶ್ರೀಪಾದರಾಜರು – ನಮ್ಮಂಥ ಶ್ರೀಪಾದಂಗಳಿಗೆ ಪ್ರಭುಸ್ವರೂಪರು. ಶ್ರೀಮದಾಚಾರ್ಯರಂತೆ ನೀವು ಲೋಕವಿಖ್ಯಾತರಾಗಿ ಮಹದ್ಕಾರ್ಯಗಳನ್ನು ಸಾಧಿಸುವಿರಿ. ರಾಜಾಧಿರಾಜರಿಂದ ಪೂಜಿತರಾಗುವಿರಿ. ಭಕ್ತಿಯ ಪಾರಂಪರ್ಯವನ್ನು ಆಸೇತುಹಿಮಾಚಲದವರೆಗೆ ವಿಸ್ತರಿಸುವಿರಿ. ಕಾಲವೇ ನಮ್ಮ ಮಾತಿಗೆ ಸಮರ್ಥನೆ ಒದಗಿಸುತ್ತದೆ."

ಎಂದರು. ವಿಬುಧೇಂದ್ರರೂ ಅವರ ಮಾತನ್ನೊಪ್ಪಿಕೊಂಡು 'ಸತ್ಯ ಸತ್ಯ' ಎಂದರು.

ಶ್ರೀಪಾದರಾಜರು ಪ್ರವಾಸ ಮುಗಿಸಿಕೊಂಡು ಶ್ರೀರಂಗಕ್ಕೆ ಬರುವ ವೇಳೆಗೆ ಅವರ ಗುರುಗಳಾದ ಸುವರ್ಣವರ್ಣತೀರ್ಥರಿಗೆ ವೃದ್ಧಾಪ್ಯ ಸಮೀಪಿಸಿತ್ತು. ತಮ್ಮ ಮಠದ ಸರ್ವಾಧಿಪತ್ಯವನ್ನು ಸುವರ್ಣವರ್ಣತೀರ್ಥರು, ಪ್ರಿಯ ಶಿಷ್ಯನಿಗೆ ವಹಿಸಿಕೊಟ್ಟು ನಿಶ್ಚಿಂತೆಯಿಂದ ಶ್ರೀಹರಿ ಚರಣಗಳನ್ನು ಸೇರಿದರು.

ಕೆಲಕಾಲ ಶ್ರೀರಂಗದಲ್ಲಿದ್ದ ಶ್ರೀಪಾದರಾಜರು ತಮ್ಮ ಮಠವಿದ್ದ ಮುಳು ಬಾಗಿಲಿಗೆ ಬಂದು ನೆಲಸಿದರು.

ತಿರುಪತಿಯ ಮೂಡಲಿಗೆ ಮುಳುಬಾಗಿಲಿದ್ದುದರಿಂದ ಅದಕ್ಕೆ ಮೂಡ್ಲ-ಬಾಗಿಲು, ಮುಳುಬಾಗಿಲು, ಮುಳವಾಯಿ ಎಂದು ಹೆಸರಾಯಿತು. ವಿಜಯನಗರ ಸಾಮ್ರಾಜ್ಯದ ಆಧಿಪತ್ಯಕ್ಕೆ ಸೇರಿದ್ದ ಮುಳುಬಾಗಿಲಿನಲ್ಲಿ ನರಸಿಂಹ ನಾಯಕರು ರಾಜಪ್ರತಿನಿಧಿಗಳಾಗಿ ಆಡಳಿತ ನಡೆಸುತ್ತಿದ್ದರು.

ಶ್ರೀಪಾದರು ಮಠದ ವ್ಯವಸ್ಥೆಯನ್ನು ಅಚ್ಚುಗಟ್ಟು ಮಾಡಿದುದಲ್ಲದೆ, ಸಂಸ್ಕೃತ ಶಿಕ್ಷಣಕ್ಕೆ ಅಪಾರ ನೆರವಿತ್ತರು. ಹೊರಗಿನಿಂದ ಮಠಕ್ಕೆ ಬರುತ್ತಿದ್ದ ವಿದ್ವಜ್ಜನರನ್ನು ರಾಜರಂತೆ ಸತ್ಕರಿಸಿ ಗೌರವಿಸುತ್ತಿದ್ದರು.

ಗೀರ್ವಾಣವಾಣಿಯಾದ ಸಂಸ್ಕೃತದ ಪ್ರಾದುರ್ಭಾವದೊಂದಿಗೆ ದೇಶ ಭಾಷೆಗಳ ಪ್ರಗತಿಯೂ ಆಗಬೇಕೆಂಬುದು ಶ್ರೀಪಾದರಾಜರ ಆಶಯವಾಗಿತ್ತು. ಪಂಡಿತರು, ವಿವಿಧ ಕಲಾ ಪಂಡಿತರಲ್ಲದೆ ಸಾಮಾನ್ಯ ಜನಕ್ಕೂ ಧರ್ಮಜ್ಞಾನ ವುಂಟಾಗಬೇಕಾದರೆ ದೇಶಭಾಷೆಗಳ ನೆರವು ಅತ್ಯಗತ್ಯವೆಂದು ಮನಗಂಡ ಶ್ರೀಪಾದರಾಜರು ಭಾಗವತ ಸಂಪ್ರದಾಯವನ್ನು ಪುನರುಜ್ಜೀವನಗೊಳಿಸಿ, ಪೂಜಾ ಕಾಲದಲ್ಲಿ ತಮ್ಮ ಪೂರ್ವಿಕರಾದ ಹರಿದಾಸರು ಹಾಗೂ ತಾವು ರಚಿಸಿದ್ದ ದೇವರ ನಾಮಗಳನ್ನು ಹಾಡಿಸುತ್ತಿದ್ದರು. ಒಮ್ಮೊಮ್ಮೆ ತಾವೇ ಭಕ್ತಿಪರವಶರಾಗಿ ಭಾಗವತಸೇವೆಗೆ ನಿಲ್ಲುತ್ತಿದ್ದರು. ಅವರು ಹಾಕಿಕೊಟ್ಟ ಮೇಲ್ಪಂಕ್ತಿಯಿಂದ ಆಬಾಲವೃದ್ಧರ ಬಾಯಿಯಲ್ಲಿ ದೇವರನಾಮಗಳು ನಲಿಯ ತೊಡಗಿದವು.

ಭಗವತ್ಸೇವೆಗೆ ಧಾರಾಳವಾಗಿ ಮಾತೃಭಾಷೆಯನ್ನು ಬಳಸುತ್ತಿದ್ದ ಶ್ರೀಶ್ರೀಪಾದರಾಜರ ಪ್ರಾಗತಿಕ ಧೋರಣೆ ಕೆಲವು ಕಟುಧರ್ಮಿಗಳನ್ನು ಕೆರಳಿಸಿತು. ಮಾತೃಭಾಷೆಯ ಬಳಕೆಯಿಂದ ಮೈಲಿಗೆಯಾಯಿತೆಂದು ಹಾರಾಡಿದ ಪಂಡಿತರಿಗೆ ಶ್ರೀಪಾದರಾಜರು,

**‘ ಧ್ಯಾನವು ಕೃತಯುಗದಲ್ಲಿ ಯಜನ**
**ಯಜ್ಞವು ತ್ರೇತಾಯುಗದಲ್ಲಿ**
**ದಾನವಾಂತಕನ ದೇವತಾರ್ಚನೆಯು ದ್ವಾಪರ**
**ಯುಗದಲ್ಲಿ ಕಲಿಯುಗದಿ**
**ಗಾನದಿ ಕೇಶವನೆಂದರೆ ಕೈಗೂಡುವನು ರಂಗವಿಠಲ ’**

ಎಂಬ ಮಹಾಸೂತ್ರವನ್ನು ಮುಂಡಿಸಿ,

“ ಭಗವಂತನಿಗೆ ಅತ್ಯಂತ ಪ್ರಿಯವಾದುದು ಗಾಯನ. ಮನಸ್ಸು ಬೆರಸಿ ಮಾತೃಭಾಷೆಯಲ್ಲಿ ಹಾಡಿದಲ್ಲದೆ ಅರ್ಥಾನ್ವಯ ತಿಳಿಯದೆ ಬೇರೆ ಭಾಷೆಗಳಲ್ಲಿ ಹಾಡಿದರೆ ಭಗವಂತ ಮೆಚ್ಚುವುದಿಲ್ಲ.”

ಎಂದು ಪ್ರತಿವಾದಿಗಳ ಬಾಯಿಮುಚ್ಚಿಸಿದರು.

ದಿವ್ಯಾಶ್ವಗಳನ್ನೇರಿ ಚಂದ್ರಗಿರಿಯನ್ನು ಬಿಟ್ಟು ಹೊರಟ, ಅರವೀಟಿ ಬುಕ್ಕನಾಯಕರು, ತಿಪ್ಪರಸಯ್ಯನವರು ಮಾರ್ಗದಲ್ಲಿ ವಿಶ್ರಾಂತಿಯನ್ನೂ ಪಡೆಯದೇ ಎರಡೇ ದಿನಗಳಲ್ಲಿ ಮುಳುಬಾಗಿಲು ಸೇರಿದರು.

ಅವರು ಬಂದಿದ್ದ ಸುದ್ದಿ ತಿಳಿಯಲು ಶ್ರೀಪಾದರಾಜರು, ಪೂಜೆಗೇ ಬರಲು ಹೇಳಿಕಳಿಸಿದರು.

ನರಸಿಂಹ ತೀರ್ಥದಲ್ಲಿ ಶುಭ್ರವಾಗಿ ಮಿಂದು, ಪೀತಾಂಬರಗಳನ್ನು ಧರಿಸಿ, ಉಭಯ ನಾಯಕರು, ನರಸಿಂಹನಾಯಕರು ಕಳಿಸಿದ್ದ ಗುರು ಕಾಣಿಕೆಯನ್ನು ಚಿನ್ನದ ಹರಿವಾಣಗಳಲ್ಲಿ ತೆಗೆದುಕೊಂಡು ಗುರುದರ್ಶನಕ್ಕೆ ಶ್ರೀಮಠಕ್ಕೆ ಬಂದರು.

ಸೇವಾತಪದಲ್ಲಿ ಲೀನರಾಗಿದ್ದ ಶ್ರೀಗಳವರು ಅರ್ಧನಿಮೀಲಿತರಾಗಿದ್ದರು. ಅವರ ಪ್ರಿಯಶಿಷ್ಯ ಯತಿರಾಜ,* ಗುರುರಚಿತ ದೇವರನಾಮವೊಂದನ್ನು ಭಕ್ತಿಪುರಸ್ಸರವಾಗಿ ಹಾಡುತ್ತಿದ್ದ.

“ ನಾ ನಿನಗೇನು ಬೇಡುವುದಿಲ್ಲ, ಎನ್ನ
ಹೃದಯಮಂಟಪದೊಳು ನಿಂದಿರೋ ಕೃಷ್ಣ ||ಪ||

ಶಿರ ನಿನ್ನ ಚರಣದಲ್ಲೆರಗಲಿ, ಎನ್ನ
ಚಕ್ಷುಗಳು ನಿನ್ನ ನೋಡಲಿ
ಕರ್ಣಗೀತಂಗಳ ಕೇಳಲಿ, ಎನ್ನ
ನಾಸಿಕ ನಿರ್ಮಾಲ್ಯ ಘ್ರಾಣಿಸಲಿ ಕೃಷ್ಣ ||೧||

ನಾಲಿಗೆ ನಿನ್ನ ಕೊಂಡಾಡಲಿ, ಎನ್ನ
ಕರಗಳೆರಡು ನಿನಗೆ ಮುಗಿಯಲಿ
ಪಾದ ತೀರ್ಥಯಾತ್ರೆ ಮಾಡಲಿ ನಿನ್ನ
ಧ್ಯಾನವೆನಗೆ ಬಂದು ಕೊಡು ಕಂಡ್ಯ ಹರಿಯೆ ||೨||

* ಶ್ರೀವ್ಯಾಸರಾಯರ ಪೂರ್ವಾಶ್ರಮದ ಹೆಸರು.

ಬುದ್ಧಿ ನಿನ್ನೊಳು ಕುಣಿದಾಡಲಿ, ಎನ್ನ
ಚಿತ್ತ ನಿನ್ನಲ್ಲಿ ನಲಿದಾಡಲಿ
ಭಕ್ತಜನರ ಸಂಗ ದೊರೆಯಲಿ ರಂಗ
ವಿಠ್ಠಲ* ನಿನ್ನಯ ದಯವಾಗಲಿ ಹರಿಯೆ ||೩||

ಚಂದ್ರಗಿರಿಯಿಂದ ಬಂದಿದ್ದ ಉಭಯ ನಾಯಕರನ್ನು ಮಠದ ಕಾರಭಾರಿಗಳು ಶ್ರೀಗುರುಗಳಿಗೆ ಪರಿಚಯ ಮಾಡಿಕೊಡಲು, ನಾಯಕರು ಉದ್ದಂಡ ಪ್ರಣಾಮಮಾಡಿ, ನರಸಿಂಹನಾಯಕರು ಕಳಿಸಿದ್ದ 'ಗುರು ಕಾಣಿಕೆ' ಯನ್ನರ್ಪಿಸಿದರು.

ಶ್ರೀಗುರುಗಳು ಪ್ರಸನ್ನ ಭಾವದಿಂದ ನಾಯಕರನ್ನು ನೋಡಿ,

"ಮಾರ್ಗಾಯಾಸದಿಂದ ಬಳಲಿದ್ದೀರಿ. ಮೊದಲು ತೀರ್ಥಪ್ರಸಾದವಾಗಲಿ. ಅನಂತರ ಉಳಿದ ವಿಷಯಗಳನ್ನು ಮಾತನಾಡೋಣ" ಎಂದರು.

ಮಹಾಮಂಗಳಾರತಿಯಾದ ಮೇಲೆ ನಾಯಕರಿಬ್ಬರಿಗೂ ಮಠದಲ್ಲಿಯೇ ತೀರ್ಥ ಪ್ರಸಾದವಾಯಿತು.

ಶ್ರೀಗುರುಗಳು ಅವರನ್ನು ತಮ್ಮ ವ್ಯಾಸಂಗ ಕೋಣೆಗೆ ಬರಮಾಡಿಕೊಂಡು, ಕುಶಲ ಪ್ರಶ್ನೆ ಮಾಡಿದ ಮೇಲೆ,

"ಇಷ್ಟು ತ್ವರೆಯಿಂದ ನೀವು ಬರಲು ಏನು ಕಾರಣ"

ಎಂದು ವಿಚಾರಿಸಿದರು.

"ಮಹಾಸ್ವಾಮಿ, ನಮ್ಮ ಒಡೆಯರಾದ ಶ್ರೀಶ್ರೀ ಕಠಾರಿ ಸಾಳುವ ನರಸಿಂಹನಾಯಕರು ಒಂದು ಪತ್ರ ಸನ್ನಿಧಿಗೆ ಕಳಿಸಿದ್ದಾರೆ. ಆದಷ್ಟು ಬೇಗ ಅದಕ್ಕೆ ತಮ್ಮ ಉತ್ತರ ತೆಗೆದುಕೊಂಡು ನಾವು ಚಂದ್ರಗಿರಿಗೆ ಮರಳಬೇಕು. ಕಾಲವಿಳಂಬವಾದಲ್ಲಿ ಅನರ್ಥ ಸಂಭವಿಸಬಹುದು."

ಎಂದು ನಾಯಕರು ಪತ್ರವನ್ನು ಯತಿರಾಜನ ಕೈಯಲ್ಲಿಟ್ಟರು.

ಶ್ರೀಗುರುಗಳ ಅಪ್ಪಣೆ ಪಡೆದು ಯತಿರಾಜ ಪತ್ರವನ್ನು ಓದಲಾರಂಭಿಸಿದ.

"ಮುಳುಬಾಗಿಲು ಮಠಾಧೀಶರಾದ, ಪರಮಗುರು ಶ್ರೀಶ್ರೀ ಶ್ರೀಪಾದ

* ಶ್ರೀ ಶ್ರೀಪಾದರಾಜರ ಅಂಕಿತ.

ರಾಜಯೋಗಿಂದ್ರರ ಚರಣ ಸನ್ನಿಧಿಯಲ್ಲಿ ಚಂದ್ರಗಿರಿಯ ಸಾಳುವ ನರಸಿಂಹ ನಾಯಕನ ಅನಂತಾನಂತ ಪ್ರಣಾಮಗಳು :

ನಾನು ಮುಳುಬಾಗಿಲು ಬಿಟ್ಟು ಹೊರಟ ಮೇಲೆ ಕಾರಣಾಂತರಗಳಿಂದ ಶ್ರೀಶ್ರೀಯವರ ದರ್ಶನ ಪಡೆಯುವ ಪುಣ್ಯ ಒದಗಿಬರಲಿಲ್ಲ. ಇದಕ್ಕಾಗಿ ತುಂಬ ವಿಷಾದಿಸುತ್ತೇನೆ.

ಕೆಲವು ದಿವಸಗಳ ಹಿಂದೆ ನಡೆದ ಒಂದು ಘಟನೆ ನನ್ನ ಮನಸ್ಸನ್ನು ಅಲ್ಲಕಲ್ಲೋಲ ಮಾಡಿದೆ. ಶ್ರೀಗುರುಗಳು ಪರಿಹಾರ ಮಾರ್ಗ ಸೂಚಿಸಿ ದಾಸನನ್ನು ಉದ್ಧರಿಸಬೇಕು.

ತಿರುಪತಿಯ ಅರ್ಚಕರು ನಡೆಸುತ್ತಿದ್ದ ಅಕೃತ್ಯಗಳು, ದುರಾಚರಣೆಗಳೂ ದಿವ್ಯಚಿತ್ತಕ್ಕೆ ವೇದ್ಯವೇ ಆಗಿದೆ. ಈ ಬಗ್ಗೆ ಸೂಕ್ತಕ್ರಮ ಕೈಗೊಳ್ಳಬೇಕೆಂದು ನಾನು ಹಲವು ಬಾರಿ ವಿಜಯನಗರ ಸಾಮ್ರಾಜ್ಯಾಧೀಶರಾದ ಶ್ರೀಶ್ರೀ ವಿರೂಪಾಕ್ಷರಾಯರಲ್ಲಿ ಬಿನ್ನವಿಸಿದೆ. ಅವರು ಆ ಬಗ್ಗೆ ಯಾವ ಕ್ರಮವನ್ನು ಕೈಗೊಳ್ಳದಿದ್ದುದಲ್ಲದೆ, ಅರ್ಚಕರನ್ನು ತಮ್ಮ ಆತ್ಮೀಯರನ್ನಾಗಿ ಮಾಡಿಕೊಂಡರು. ರಾಜಾಶ್ರಯದಿಂದ ಮತ್ತಷ್ಟು ಪ್ರಬಲರಾದ ಅರ್ಚಕರು, ಅವರ ಅನುಯಾಯಿಗಳು ಯಾತ್ರಿಕರನ್ನು ಹಲವು ವಿಧದಲ್ಲಿ ಪೀಡಿಸಿ, ದೋಚುತ್ತಿದ್ದುದಲ್ಲದೆ, ತಿರುವೆಂಕಟನಾಥನ ವಸ್ತ್ರ, ಭೂಷಣ, ವಾಹನಗಳನ್ನು ತಮ್ಮದನ್ನಾಗಿಸಿಕೊಂಡು ಉದ್ಧಟರಾಗಿ ಮೆರೆಯಹತ್ತಿದರು. ಭಕ್ತಾದಿಗಳು ತಿರುಪತಿ – ತಿರುಮಲೆಗೆ ಹೋಗುವುದಕ್ಕೆ ಅಂಜಲಾರಂಭಿಸಿದರು. ಈ ಬಗ್ಗೆ ನನಗೆ ಪ್ರತಿನಿತ್ಯ ವರದಿಗಳು ಬರುತ್ತಿದ್ದವು. ತಿರುಪತಿಯ ವಿದ್ಯಮಾನಗಳ ಕೂಲಂಕಷ ವಿಚಾರಣೆ ನಡೆಸಿ, ಸೂಕ್ತ ಕಾರ್ಯಕ್ರಮ ಕೈಗೊಳ್ಳಲು ನಾನು ಚಿಟ್ಟಿ ಗಂಗಣ್ಣನಾಯಕರನ್ನೂ, ಈಶ್ವರನಾಯಕರನ್ನೂ ತಿರುಪತಿಗೆ ಕಳಿಸಿಕೊಟ್ಟೆ. ಅವರು ಸಾದ್ಯಂತ ವಿಚಾರಣೆ ನಡೆಸಿ ಅರ್ಚಕರ ಮುಖಂಡರಾದ ದೇಶಿಕಾಚಾರ್ಯರಿಗೂ, ಅರ್ಚಕ ಮಂಡಳಿಗೂ, ದೇವಸ್ಥಾನದ ಮೊಕ್ತೇಸರರು ಊಳಿಗದವರಿಗೂ ಮರಣದಂಡನೆ ವಿಧಿಸಿದರು."

ಶ್ರೀಗುರುಗಳು ಮ್ಲಾನವದನರಾಗಿ

" ಶ್ರೀಹರಿ – ಶ್ರೀಹರಿ " ಎಂದರು.

ಯತಿರಾಜ ಪತ್ರವಾಚನ ಮುಂದುವರಿಸಿದ.

" ಈ ಸುದ್ದಿ ತಿಳಿದ ಕೂಡಲೆ ನನ್ನ ಧರ್ಮಪತ್ನಿ ಶ್ರೀರಂಗಮಾಂಬೆ 'ಬ್ರಹ್ಮಹತ್ಯಾದೋಷ' ತಟ್ಟಿತೆಂದು ಹೆದರಿ, ನಿರಶನವ್ರತ ಆರಂಭಿಸಿದ್ದಾಳೆ. ತಾವು ಇಲ್ಲಿಗೆ ಕೂಡಲೆ ದಯೆಮಾಡಿಸಿ, ಆಕೆಗೆ ಸಮಾಧಾನ ಹೇಳಬೇಕಲ್ಲದೆ, ನನಗೆ ಒದಗಿರುವ ಬ್ರಹ್ಮಹತ್ಯಾದೋಷವನ್ನೂ ಪರಿಹರಿಸಬೇಕೆಂದು ಅಂಜಲಿ ಬದ್ಧನಾಗಿ ಬೇಡಿಕೊಳ್ಳುತ್ತೇನೆ."

ಗುರುದೇವರು ವಿಚಾರಮಾಡುತ್ತ ಕುಳಿತು ಬಿಟ್ಟರು.

ಭಯಭ್ರಾಂತರಾದ ಬುಕ್ಕ ನಾಯಕರು,

" ಅಭಯ ಪ್ರದಾನವಾಗಬೇಕು "

ಎಂದು ಬೇಡಿದರು.

ಶ್ರೀಗುರುಗಳು ಮಾರುತ್ತರಗೊಡಲಿಲ್ಲ.

ತಿಪ್ಪರಸಯ್ಯನವರು ಅತ್ಯಂತ ವಿನಯದಿಂದ,

" ಧಣಿಗಳಿಗೆ ಬ್ರಹ್ಮಹತ್ಯಾದೋಷ ಪ್ರಾಪ್ತವಾಗಿದೆಯೇ ?" ಎಂದು ಕೇಳಿದರು.

" ಬ್ರಹ್ಮಹತ್ಯೆ ಮಾಡಿದ ಮೇಲೆ ದೋಷ ಪ್ರಾಪ್ತವಾಗದೆ ಇರುತ್ತದೆಯೇ ತಿಪ್ಪರಸಯ್ಯನವರೇ !"

ಗುರುವಾಣಿಯ ವಜ್ರಾಘಾತದಿಂದ ಝುರ್ಝುರಿಸಿದ ಬುಕ್ಕ ನಾಯಕರು,

" ಚಂದ್ರಗಿರಿಗೆ ಶ್ರೀಗುರುಗಳ ಸ್ವಾರಿ ಚಿತ್ತೈಸಬೇಕು. ದುಃಖಪರವಶ ರಾಗಿ ಮಾತೃಶ್ರೀ ಶ್ರೀರಂಗಮಾಂಬೆಯವರು ವಿಧಿವಶರಾದರೆ ಚಂದ್ರಗಿರಿ ಅನಾಯಕವಾಗುವುದಲ್ಲದೆ, ವಿಜಯನಗರ ಸಾಮ್ರಾಜ್ಯವೇ ಕುಸಿದು ಬೀಳು ತ್ತದೆ. ಸಾಮ್ರಾಜ್ಯದ ಭವಿಷ್ಯ ಸಂಪೂರ್ಣವಾಗಿ ಧಣಿಗಳಾದ ಶ್ರೀ ನರಸಿಂಹ ನಾಯಕರನ್ನು ಅವಲಂಬಿಸಿದೆ."

" ಆಗಬಾರದುದು ಆಗಿಹೋಯಿತು. ಇನ್ನು ಚಿಂತಿಸಿ ಫಲವಿಲ್ಲ. ಶ್ರೀರಂಗಮಾಂಬೆ ನಮ್ಮ ಸದ್ಭಕ್ತಳು. ಸಾಮ್ರಾಜ್ಯ ಲಕ್ಷ್ಮಿಯಾಗುವ ಯೋಗ ಪಡೆದಿರುವ ಆ ತಾಯಿ ನಿರಶನವ್ರತ ಪಾಲಿಸಿ ತನ್ನ ಜೀವನ ಪರಿ ಸಮಾಪ್ತಿಗೊಳಿಸಲು ನಾವು ಅವಕಾಶಕೊಡುವುದಿಲ್ಲ. ನಾವು ಕೊಡುವ ಪ್ರಸಾದವನ್ನು ಕೂಡಲೆ ತೆಗೆದುಕೊಂಡು ಹೋಗಿ ನಾಯಕರಿಗೂ ಶ್ರೀರಂಗ

ಮಾಂಬೆಗೂ ಕೊಡಿ. ಈ ಸಂಸ್ಥಾನ ನಮ್ಮ ಕೊರಳಿಗೆ ಬಿದ್ದಿರುವುದರಿಂದ ನಾವೂ ಬದ್ಧರಾಗಿದ್ದೇವೆ. ಸಂಸ್ಥಾನಾಡಳಿತ ವ್ಯವಸ್ಥೆಮಾಡಿ ನಾವು ಕ್ಷಿಪ್ರವಾಗಿ ಚಂದ್ರಗಿರಿಗೆ ಬಂದು ಅಲ್ಲಿಯೇ ಚಾತುರ್ಮಾಸ್ಯ ಕಳೆಯುತ್ತೇವೆಂದು ನರಸಿಂಹ ನಾಯಕರಿಗೆ ತಿಳಿಸಿ."

"ಮಹದಾಜ್ಞೆ."

"ನಿರಶನವ್ರತ ತ್ಯಜಿಸಿ, ನಿಶ್ಚಿಂತಳಾಗಿರಬೇಕೆಂದು ನಮ್ಮ ಪುತ್ರಿ ಶ್ರೀರಂಗಮಾಂಬೆಗೆ ತಿಳಿಸಿ. ಮಿಕ್ಕೆಲ್ಲ ವಿಷಯಗಳನ್ನೂ ನಾವು ನೋಡಿ ಕೊಳ್ಳುತ್ತೇವೆ."

ಎನ್ನಲು ಉಭಯ ನಾಯಕರು ಆನಂದತುಂದಿಲರಾದರು.

ಶ್ರೀಶ್ರೀಗಳವರು ಪೂಜೆ ಮುಗಿಸಿ, ಶಿಷ್ಯ ಯತಿರಾಜನತ್ತ ದೃಷ್ಟಿ ಬೀರಿದರು.

ದೇವಮಂದಿರದ ಮೂಲೆಯಲ್ಲಿದ್ದ ತಂಬೂರಿಯನ್ನೆತ್ತಿಕೊಂಡು ಯತಿ ರಾಜ ತನ್ನ ಮಂಜುಳ ಕಂಠದಿಂದ ಹಾಡತೊಡಗಿದ.

"ಇದನಾದರೂ ಕೊಡದಿದ್ದರೆ ನಿನ್ನ
ಪದಕಮಲವ ನಂಬಿ ಭಜಿಸುವುದೇಕೋ ||ಪ||

ಗ್ರಾಸವಸನಗಳಿಲ್ಲವೆಂದು ನಿನ್ನ |
ಬ್ಯಾಸರಿಸಿ ಬೇಡ ಬಂದಿಲ್ಲ ||

ವಾಸುದೇವನೆ ನಿನ್ನ ದಾಸರ ದಾಸರ
ದಾಸದಾಸ್ಯವ ಕೊಡು ಸಾಕೆಂದರೆ
ಸತಿಸುತರು ಸಂತತ ಭಾಗ್ಯದಲ್ಲಿಪ್ಪ
ಅತಿಶಯಬೇಕೆಂದು ಬಂದದ್ದಿಲ್ಲ ||

ಇತರ ವಿಷಯಗಳಿಗೆರಗುವುದೆನ್ನ ಮನವು
ಕಥಾಮೃತವ ಕೇಳಿಸು ಸಾಕೆಂದರೆ
ಒಡವೆಗಳು ಒಡ್ಯಾಣಗಳಲ್ಲಿಲ್ಲೆಂದ
ಬಡವನೆಂದು ಬೇಡಬಂದಿಲ್ಲ ||

ಒಡೆಯ ನಿನ್ನಡಿಗಳಿಗೆರಗುವುದೆ ಸುಖ
ಬಿಡದಿರುವುದು ಒಂದೆ ಕೊಡು ಸಾಕೆಂದರೆ
ಸಾಲವಾಯಿತು ಸಂಬಳವು ಎನಗಿಲ್ಲ
ಸಾಲವೆಂದು ಬೇಡಬಂದಿಲ್ಲ ||

ನಾಲಿಗೆಯಲಿ ನಿನ್ನ ನಾಮದುಚ್ಚಾರಣೆ
ಪಾಲಿಸಬೇಕೆಂದು ಬಂದೆ ನಾನಲ್ಲದೆ
ಆಗಬೇಕು ರಾಜ್ಯಭೋಗಗಳೆನಗೆಂದು
ಬೇಗದಿಂದಲಿ ಬೇಡಬಂದದ್ದಿಲ್ಲ ||

ನಾಗಶಯನ ರಂಗವಿಠಲ ನಿನ್ನಯ
ಬಾಗಿಲಕಾಯ್ವ ಭಾಗ್ಯ ಸಾಕೆಂದರೆ " ||

ಯತಿರಾಜನ ಭಾಗವತ ಸೇವೆ ಮುಗಿದಮೇಲೆ ಮಹಾಮಂಗಳಾರತಿಯಾಯಿತು.

ಶ್ರೀಶ್ರೀಗುರುಗಳು ನಾಯಕರಿಗೆ ಪ್ರಸಾದವನ್ನನುಗ್ರಹಿಸಿದರು.

ಗುರ್ವಾನುಗ್ರಹವನ್ನು ಶಿರಸ್ಸಿನಲ್ಲಿ ಧರಿಸಿದ ನಾಯಕರು ಕಾಲವಿಳಂಬ ಮಾಡದೆ, ಚಂದ್ರಗಿರಿಯ ಅಭಿಮುಖರಾದರು.

# ೬

ತಿರುಪತಿಯ ದುರಂತದ ಸುದ್ದಿ ಕೇಳಿ ಕ್ಷುಬ್ಧರಾಗಿದ್ದ ವಿರೂಪಾಕ್ಷರಾಯರನ್ನು ಭಟಕಳದ ಸುದ್ದಿ ಮತ್ತಷ್ಟು ಅಸ್ತವ್ಯಸ್ತಗೊಳಿಸಿತು.

ಶುಕ್ಲಪಕ್ಷದ ಚಂದ್ರನಂತೆ ವೃದ್ಧಿಯಾಗುತ್ತಿದ್ದ ನರಸಿಂಹನಾಯಕರ ಅಭ್ಯುದಯ ಕಂಡು ವಿರೂಪಾಕ್ಷರಾಯರಿಗೆ ಅಸಹನೆ, ಅಸಂತೋಷಗಳುಂಟಾದುವು.

" ಹಾವು ಇನ್ನೂ ಮರಿಯಾಗಿರುವಾಗಲೇ ಕೊಲ್ಲುವುದು ಒಳ್ಳೆಯದು ಮಹಾಪ್ರಭು. ಅಜಗರ ಬಲಿತಮೇಲೆ ಸಾಮ್ರಾಜ್ಯವನ್ನೇ ನುಂಗಬಹುದು."

ಎಂದು ಕುಚೇಲನಾಯಕ ಸಲಹೆಯಿತ್ತ.

" ಅಜಗರ ಈಗಾಗಲೇ ಬಲಿತುಬಿಟ್ಟಿದೆ ನಾಯಕರೇ – ಇದನ್ನು ದಮನಿಸುವುದು ಸುಲಭದ ಕೆಲಸವಲ್ಲ."

" ಉಪಾಯಾಂತರದಿಂದ ತಾವು ನರಸಿಂಹನಾಯಕರನ್ನು ರಾಜಧಾನಿಗೆ ಬರಮಾಡಿಕೊಂಡರೆ, ನಾವು ಅವರನ್ನು ಬಂಧಿಸಿ, ಅವರು ಜನ್ಮ ತಳೆದುದೇ ಸುಳ್ಳು ಎನಿಸಿಬಿಡುತ್ತೇವೆ."

" ನಮ್ಮ ಆಹ್ವಾನ ಮನ್ನಿಸಿ ನಾಯಕರು ಇಲ್ಲಿಗೆ ಬರುತ್ತಾರೆಂದು ಭಾವಿಸಿರುವಿರಾ ?"

" ರಾಜಾಜ್ಞೆಯನ್ನುಲ್ಲಂಘಿಸಲು ಅವರಿಗೆಷ್ಟು ಧೈರ್ಯ."

" ಅವರು ಉಲ್ಲಂಘಿಸಿದರೆ ?"

" ಸೈನ್ಯಸಮೇತನಾಗಿ ನಾನು ಚಂದ್ರಗಿರಿಗೆ ಹೋಗಿ ಅವರನ್ನು ಕೈಸೆರೆ ಹಿಡಿದು ತರುತ್ತೇನೆ."

" ಅವರೊಂದಿಗೆ ಸೆಣಸಬೇಕಾಗುತ್ತದೆ."

" ಅದಕ್ಕೆ ಸಿದ್ಧವಾಗಿದ್ದೇನೆ."

" ನೀವು ಸಿದ್ಧವಾಗಿದ್ದೀರಿ – ನಮ್ಮ ಸೈನ್ಯ ಸಿದ್ಧವಾಗಿದೆಯೇ ? ನಮ್ಮ ಸೈನ್ಯ ನಮ್ಮ ಮೇಲೇ ತಿರುಗಿಬಿದ್ದರೆ ಏನು ಮಾಡುವುದು ?"

" ಈಗೇನು ಮಾಡುವುದು – ತಾವೇ ಅಪ್ಪಣೆಕೊಡಿಸಬೇಕು."

" ತಟಸ್ಥರಾಗಿರುವುದೇ ಒಳ್ಳೆಯದು."

ಪ್ರಭುಗಳ ಅಳ್ಳೆದೆ ಕಂಡು ಕುಚೇಲನಾಯಕನಿಗೆ ಅಸಹ್ಯವಾಯಿತು. ತಾನು ಹೆಚ್ಚು ಸ್ವಾತಂತ್ರ್ಯ ವಹಿಸಿದರೆ ಶೀಘ್ರಕೋಪಿಗಳಾದ ಪ್ರಭುಗಳ ಆಗ್ರಹಕ್ಕೆ ತುತ್ತಾಗಬೇಕೆಂದು ಚಿಂತಿಸಿದ ನಾಯಕ,

" ಭಟಕಳದ ವ್ಯವಹಾರದ ಬಗ್ಗೆಯೂ ತಟಸ್ಥರಾಗಿರೋಣವೇ ?" ಎಂದು ಕೇಳಿದ.

" ನಾವು ಭಟಕಳದ ವರ್ತಕರಿಗೆ ಮುಂಗಡವಾಗಿ ಕೊಟ್ಟಿರುವ ಹಣವೆಷ್ಟು ?"

" ಎರಡು ಲಕ್ಷ ವರಾಹಗಳು ?"

" ಕುದುರೆಗಳು ದೊರೆಯುವ ಸಂಭವವಿಲ್ಲವೇ ?"

" ಹಣವೂ ಹೋಯಿತು – ಕುದುರೆಗಳೂ ಹೋದವು. ಮಿಾಯಾ ಪಾಚ್ಚಾಸಾಹೇಬ್, ನಮ್ಮ ಹಣದಿಂದ ಕುದುರೆಗಳನ್ನು ತರಿಸಿ ಬಹಮನಿ ರಾಜ್ಯಕ್ಕೆ ಮಾರಿದ್ದಾನೆ."

" ಮಿಾಯಾನಿಗೆ ನಮ್ಮ ವಿಶ್ವಾಸಕ್ಕಿಂತ ಜಾತ್ಯಭಿಮಾನವೇ ಹೆಚ್ಚಾಯಿತು."

" ಈ ರೀತಿ ನಾವು ಅಶಿಸ್ತನ್ನು ಬೆಳೆಯಗೊಡುವುದು ತುಂಬ ಅಪಾಯಕಾರಿ. ಭಟಕಳದ ಒಬ್ಬ ವ್ಯಾಪಾರಿ ನಮ್ಮ ಸಾಮ್ರಾಜ್ಯವನ್ನೇ ಕಡೆಗಾಣಿಸುವುದೆಂದರೇನು? ಮಿಾಯಾನಿಗೂ ಅವನ ಸಂಗಡಿಗರಿಗೂ ತಕ್ಕ ಶಾಸ್ತಿಮಾಡದಿದ್ದರೆ ನಮ್ಮ ಗೌರವ ತೃಣಪ್ರಾಯವಾಗುತ್ತದೆ."

" ಈ ವಿಷಯ ತಿಮ್ಮಣ್ಣ ದಣ್ಣಾಯಕರಲ್ಲಿ ಪರ್ಯಾಲೋಚಿಸಿರುವಿರಾ ?"

" ಅವರು ಮೇಲುಕೋಟೆಗೆ ಯಾತ್ರೆ ಹೊರಡುವ ಸಿದ್ಧತೆಯಲ್ಲಿದ್ದಾರೆ. ಎಲ್ಲವನ್ನೂ ತಮಗೆ ನಿವೇದಿಸಿ, ತಮ್ಮ ಆಜ್ಞಾನುಸಾರ ನಡೆಯಬೇಕೆಂದು ನನಗೆ ತಿಳಿಸಿದರು."

ರೋಷದಿಂದ ಕಂಪಿಸುತ್ತಾ ವಿರೂಪಾಕ್ಷರಾಯರು,

" ನೀವು ಸೈನ್ಯಸಮೇತರಾಗಿ ಈಗಲೇ ಭಟಕಳಕ್ಕೆ ಹೊರಡಿ. ಮಿಾಯಾನನ್ನು ಅವನ ಸಂಗಡಿಗರನ್ನೂ ಬರಮಾಡಿಕೊಂಡು, ' ಹಣ

ಹಿಂದಿರುಗಿಸಿ ' ಎಂದು ಕೇಳಿ. ಅವರು ಹಣ ಕೊಟ್ಟರೆ ಸರಿ. ಇಲ್ಲವಾದರೆ ಭಟಕಳದ ಮುಸ್ಲಿಮರೆಲ್ಲರ ವಂಶವನ್ನೂ ತೊಡೆದುಹಾಕಿಬಿಡಿ. ವಿಜಯನಗರ ಸಾಮ್ರಾಜ್ಯಾಧೀಶರು ದುರ್ಬಲರಲ್ಲವೆಂಬುದು ಲೋಕಕ್ಕೆ ವಿದಿತವಾಗಲಿ."

ಎಂದು ಆಜ್ಞಾಪಿಸಿದರು.

ಕೂಡಲೆ ವಿಜಯನಗರದಿಂದ ಪ್ರಯಾಣ ಬೆಳಸಿದ ಕುಚೇಲನಾಯಕ ಹೊನ್ನಾವರಕ್ಕೆ ಬಂದು, ಅಲ್ಲಿನ ಅಧಿಕಾರಿ ಚನ್ನಪ್ಪನಾಯಕನನ್ನು ಜತೆಯಲ್ಲಿ ಕರೆದುಕೊಂಡು ಭಟಕಳಕ್ಕೆ ಬಂದ.

ಮಿಾಯಾನ ವಿಶ್ವಾಸಘಾತಕತನಕ್ಕೆ ತಕ್ಕ ಪ್ರತೀಕಾರ ಕೈಗೊಳ್ಳಲು ಚನ್ನಪ್ಪನಾಯಕನೂ ಉತ್ಸುಕನಾಗಿದ್ದ.

ಭಟಕಳವನ್ನು ಬಳಸಿದ ಕುಚೇಲನಾಯಕ, ಮಿಾಯಾನನ್ನೂ ಅವನ ಸಹವರ್ತಕರನ್ನೂ ಬಂಧಿಸಿ, ಚಿತ್ರಹಿಂಸೆಗೊಳಗಾಗಿಸಿ ಮರಣಹೋಮ ಮಾಡಿಬಿಟ್ಟ.

ಅಲ್ಲಿ ಇಲ್ಲಿ ತಲೆಮರಸಿಕೊಂಡಿದ್ದ ಮುಸಲ್ಮಾರು ಕುಲ್ಬರ್ಗಿಗೂ, ಗೋವೆಗೂ ಓಡಿಹೋದರು.

ಕುಚೇಲನಾಯಕ ಮುಸ್ಲಿಮ ವರ್ತಕರ ಚರಸ್ಥಿರ ಸ್ವತ್ತುಗಳನ್ನು ಮುಟ್ಟುಗೋಲು ಹಾಕಿಕೊಂಡು, ದ್ರವ್ಯರಾಶಿಯೊಂದಿಗೆ ವಿಜಯನಗರಕ್ಕೆ ಹಿಂದಿರುಗಿದ.

ಭಟಕಳದ ಹತ್ಯಾಕಾಂಡದಿಂದ ವಿರೂಪಾಕ್ಷರಾಯರಿಗೆ ಮುಂಗಡದ ಹಣವೇನೋ ಕೈಸೇರಿತು. ಆದರೆ ರಾಜಧಾನಿಯ ಹಿಂದೂ ಮುಸಲ್ಮಾನ ಪ್ರಜೆಗಳು ರಾಯರ ಕ್ರೌರ್ಯ ಕಂಡು ತಲ್ಲಣಿಸಿದರು. ರಾಯರ ಪಕ್ಷಪಾತಿಗಳಾಗಿದ್ದವರು ಕೂಡ ಅವರ ರಕ್ತಪಿಪಾಸೆಗಾಗಿ ಮರುಗಿದರು.

ಹಿರಿಯ ದಣ್ಣಾಯಕರಾದ ಸಿಂಗಪ್ಪನವರು ಮಮ್ಮಲ ಮರುಗಿ,

" ಇದು ಬರಲಿರುವ ಮಹಾಪ್ರಳಯದ ಪೂರ್ವಸೂಚನೆ " ಎಂದರು.

## ೧೦

ಮುಳುಬಾಗಿಲು ಮಠದಿಂದ ರಾಯಸ ಬರಲು, ನರಸಿಂಹನಾಯಕರು ಅತ್ಯಾನಂದಭರಿತರಾಗಿ ಶ್ರೀಗುರುಗಳ ಸ್ವಾಗತಸಿದ್ಧತೆ ಮಾಡಲಾರಂಭಿಸಿದರು.

ಮಹಾಪುರುಷನ ಆಗಮನವನ್ನು ಇಡಿಯ ಚಂದ್ರಗಿರಿಯೇ ಭಕ್ತಿಪ್ರೇಮ ಗಳಿಂದ ನಿರೀಕ್ಷಿಸಿತು.

ಹೆಜ್ಜೆ ಹೆಜ್ಜೆಗಳಿಗೂ ಮಂಟಪಗಳು ರಚಿತವಾದವು.

ಪ್ರತಿಯೊಂದು ಮನೆಯೂ ಸಾರಣೆಕಾರಣೆಗೊಂಡಿತು.

ರಸ್ತೆಗಳು ಸ್ವಚ್ಛಗೊಳಿಸಲ್ಪಟ್ಟವು.

ಚಂದ್ರಗಿರಿ ಅರಮನೆಯ ಸಮೀಪದಲ್ಲಿದ್ದ ಭವ್ಯವಾದ 'ಚಂದ್ರಮಹಲು' ದೇವಮಾನ್ಯ ಅತಿಥಿಯ ಬಿಡಾರವಾಗಿ ಪರಿವರ್ತಿಸಲ್ಪಟ್ಟಿತು. ಚಂದ್ರಮಹಲಿನ ಆವರಣದಲ್ಲಿ ವಿಶಾಲ ಚಪ್ಪರ ಏರ್ಪಡಿಸಿ, ಅದರಲ್ಲಿ ಭಾಗವತ ಸೇವೆ ನಡೆಯಲು ಅನುಕೂಲ ಕಲ್ಪಿಸಲಾಯಿತು.

ಶ್ರೀಗುರುಗಳು ಊರಿನ ಹೆಬ್ಬಾಗಿಲು ತಲುಪುವುದರಲ್ಲಿ ಅಲ್ಲಿ ಸೇರಿದ್ದ ನರಸಿಂಹನಾಯಕರು, ಅವರ ದಣ್ಣಾಯಕರು, ರಾಜಪರಿವಾರ, ನಗರದ ಮುಖ್ಯರು, ಮೇನೆಯಲ್ಲಿ ಶ್ರೀಗುರುಗಳು ಆಗಮಿಸಿದೊಡನೆಯೇ ಭವ್ಯ ಸ್ವಾಗತ ನೀಡಿದರು.

ನಾಯಕರ ಧರ್ಮಪತ್ನಿ ಶ್ರೀರಂಗಮಾಂಬಾ, ಸಖೀ ಭ್ರಮರಾಂಬೆಯ ಜತೆಯಲ್ಲಿ ಶ್ರೀಗುರುಗಳಿಗೆ ಮುತ್ತಿನಾರತಿ ಬೆಳಗಲು, ನಾಯಕರು ಮೇನೆಯ ಬಳಿ ಬಂದು ಶ್ರೀಗುರುಗಳ ಚರಣಪದ್ಮಗಳ ಮೇಲೆ ಶಿರಸ್ಸನ್ನಿಡಲು, ಶ್ರೀಗುರು ಗಳು ಪ್ರೀತಿಯಿಂದ ತಲೆ ನೇವರಿಸಿ,

" ಏಳು – ನನ್ನ ಮೋಹನ ಮುರಾರಿ – ಯೋಚಿಸಬೇಡ " ಎಂದರು.

ಗುರುಸ್ವಾಮಿಯ ಕರುಣಾದ್ರ್ರಪೂರ್ಣ ಹರಕೆ ಕೇಳಿ ನಾಯಕರ ಕಣ್ಣು ಗಳಿಂದ ಆನಂದಭಾಷ್ಪಗಳುದುರಿದವು.

ಅರಮನೆಯ ಸಕಲ ಗೌರವದೊಂದಿಗೆ ಶ್ರೀಗುರುಗಳ ಮೆರವಣಿಗೆ ಹೊರಟಿತು.

ದಾರಿಯುದ್ದಕ್ಕೂ ಜನ ಗುರುಗಳನ್ನು ಪೂಜಿಸಿದರು. – ಹೆಂಗಳೆಯರು ಆರತಿ ಬೆಳಗಿದರು.

ಶ್ರೀಗುರುಗಳು ' ಚಂದ್ರಮಹಲು ' ಸೇರುವ ವೇಳೆಗೆ ಅಪರಾಹ್ನ ವಾಯಿತು.

ಅವರು ಮಿಂದು, ನಿತ್ಯಪೂಜೆಯನ್ನು ಮುಗಿಸಿಕೊಂಡು, ಶಿಷ್ಯರೊಂದಿಗೆ ಹರಿಪ್ರಸಾದ ಸ್ವೀಕರಿಸಿದರು.

ಗುರುಗಳು ಆರೋಗಣೆ ಒಪ್ಪಿಸಿಕೊಂಡ ಮೇಲೆ ನರಸಿಂಹನಾಯಕರೂ, ಶ್ರೀರಂಗಮಾಂಬೆಯೂ ಪ್ರಸಾದ ಸ್ವೀಕರಿಸಿ, ಗುರುದರ್ಶನಕಾಂಕ್ಷಿಗಳಾಗಿ ' ಚಂದ್ರಮಹಲಿ ' ಗೆ ಬಂದರು.

ಅವರನ್ನು ಪ್ರೀತಿಯಿಂದ ಬರಮಾಡಿಕೊಂಡ ಶ್ರೀಗುರುಗಳು ಶ್ರೀರಂಗ ಮಾಂಬೆ, ಅಳುತ್ತ ನಿಂತಿದ್ದುದನ್ನು ಕಂಡು ಅಕ್ಕರೆಯಿಂದ,

" ಶ್ರೀರಂಗಮಾಂಬಾ, ಅಳುವುದಕ್ಕೇನಾಯಿತು ? ನಿನ್ನ ಇಷ್ಟದಂತೆ ನಾವು ಬಂದಿದ್ದೇವೆ. ಇನ್ನೇಕೆ ದುಃಖಿಸುವೆ ತಾಯೀ ?"

"ಜ್ಞಾತಾಜ್ಞಾತವಾಗಿ ನಮ್ಮಿಂದ ಮಹಾಪರಾಧವಾಗಿದೆ ಗುರುದೇವಾ – ಬ್ರಹ್ಮಹತ್ಯಾಘಾತಕ ಸುತ್ತಿಕೊಂಡಿದೆ. ಅದನ್ನು ತಾವು ಪರಿಹರಿಸಿ ನಮ್ಮನ್ನು ಉದ್ಧರಿಸಬೇಕು."

" ತಿರುಪತಿಯ ಅರ್ಚಕರನ್ನು ಕೊಲ್ಲಿಸದೆ, ಅಲ್ಪ ಶಿಕ್ಷೆ ವಿಧಿಸಿ ಬಿಟ್ಟು ಬಿಡಬಹುದಾಗಿತ್ತು."

ನರಸಿಂಹನಾಯಕರು ಅರ್ಚಕರು ಮಾಡುತ್ತಿದ್ದ ಅತ್ಯಾಚಾರಗಳು, ತಿರುಪತಿಯಿಂದ ಬರುತ್ತಿದ್ದ ಭಕ್ತಾದಿಗಳ ಗೋಳನ್ನು ವಿವರಿಸಲು ಶ್ರೀಗುರುಗಳು

" ಹರಿಚಿತ್ತ – ಯೋಚನೆಮಾಡಬೇಡಿ. ನಾಳೆಯಿಂದಲೇ ನಾನು ಪ್ರಾಯಶ್ಚಿತ್ತ ವಿಧಿ ಕೈಗೊಂಡು, ನಿಮ್ಮನ್ನು ದೋಷವಿಮುಕ್ತರನ್ನಾಗಿ ಮಾಡುತ್ತೇವೆ."

ನರಸಿಂಹನಾಯಕರು ದೈನ್ಯತೆಯಿಂದ ಶ್ರೀಗುರುಗಳಿಗೆ ಅಡಿಗಡಿಗೆ ನಮಿಸಿ,

" ಅಲ್ಪನಾದ ನನ್ನಿಂದ ಶ್ರೀಗುರುಗಳಿಗೆಷ್ಟು ತೊಂದರೆ – ಎಷ್ಟು ದುಃಖ !"

" ಹುಚ್ಚಾ – ನಮ್ಮನ್ನು ನೀನು ಗುರುಗಳೆಂದು ಒಪ್ಪಿಕೊಂಡೆ – ನಿನ್ನನ್ನು ನಾವು ಶಿಷ್ಯನೆಂದು ಪರಿಗ್ರಹಿಸಿದೆವು, ಅಜ್ಞಾನಪರವಶನಾಗಿ ಶಿಷ್ಯ ಒಂದು ತಪ್ಪುಮಾಡಿದರೆ, ತಪ್ಪು ಅವನದಲ್ಲ, ಗುರುವಿನದು. ಗುರು ತನ್ನ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸಿಲ್ಲವೆಂದು ಇದರಿಂದ ವ್ಯಕ್ತವಾಗುತ್ತದೆ."

" ಎಲ್ಲಿಯಾದರೂ ಉಂಟೇ ಗುರುನಾಥಾ ?".

" ಗುರು ಶಿಷ್ಯ ಸಂಬಂಧವೇ ಹಾಗೆ ನಾಯಕಾ – ಗುರು ಮಾಡಿದ ತಪ್ಪಿಗೆ ಶಿಷ್ಯ ಶಿಕ್ಷಾರ್ಹ ; ಶಿಷ್ಯ ಮಾಡಿದ ತಪ್ಪಿಗೆ ಗುರು ಶಿಕ್ಷಾರ್ಹ."

ಎಂದು ಶಿಷ್ಯ ಯತಿರಾಜನ ಕಡೆ ತಿರುಗಿ,

" ಅಲ್ಲವೇ ಯತಿರಾಜಾ " ಎಂದರು.

" ಹೌದು ಗುರುಸ್ವಾಮಿ. ತನ್ನನ್ನು ತಾನು ನಿರ್ವಿಕಲ್ಪ ಭಾವದಿಂದ ಗುರುವಿಗೆ ಅರ್ಪಿಸಿಕೊಳ್ಳುವ ಶಿಷ್ಯ, ಮುಕ್ತನಾಗುತ್ತಾನೆ. ಆ ತರುವಾಯ ಅವನ ಸಮಸ್ತ ಕಾರ್ಯಗಳ ಉತ್ತರವಾದಿತನ ಗುರುವಿನದೇ ಆಗಿರುತ್ತದೆ."

ಶ್ರೀಗುರುಗಳು ನಸುನಕ್ಕು,

" ಈಗ ನೀನು ಶಿಷ್ಯನಾಗಿದ್ದೀ – ಈ ಮಾತು ಹೇಳುತ್ತಿರುವೆ – ನಾಳೆ ನೀನೂ ಗುರುವಾಗುವೆ ಯತಿರಾಜಾ – ಆಗ ನೀನಿಂದು ಆಡುತ್ತಿರುವ ಮಾತನ್ನು ಸ್ಮರಿಸಿಕೊಳ್ಳಬೇಕು."

" ಮಹದಪ್ಪಣೆ."

" ಸಾಯಂಪೂಜೆಯ ಸಿದ್ಧತೆಯಾಗಿದೆಯೇ ನೋಡಿ ಬಾ " ಎಂದರು.

ಯತಿರಾಜ ಹೊರಗೆ ಹೋಗಲು ಅಶ್ಚರ್ಯಚಕಿತರಾಗಿದ್ದ ನರಸಿಂಹನಾಯಕರು,

" ಈ ವಟುವು ಯಾರು ಗುರುದೇವಾ " ಎಂದರು.

ಒಳಗುಣ್ಮಿದಾನಂದದಿಂದ ಶ್ರೀಪಾದರಾಜರ ಮುಖ ದೇದೀಪ್ಯಮಾನವಾಗಿ ಬೆಳಗಿತು.

" ಹಿರಿಯರೂ, ಪರಮಪೂಜ್ಯರೂ ಆದ ಶ್ರೀಬ್ರಹ್ಮಣ್ಯತೀರ್ಥ ಸದ್ಗುರುಗಳು ಈ ಬಾಲಕನನ್ನು ನಮ್ಮ ಬಳಿ ವ್ಯಾಸಂಗಕ್ಕೆ ಕಳಿಸಿಕೊಟ್ಟಿದ್ದಾರೆ. ಇವನಿಗೆ ಏನು ಹೇಳಿಕೊಡಬೇಕೋ ನಮಗೇ ತಿಳಿಯದಾಗಿದೆ. ಸುಧಾ ಗ್ರಂಥಕ್ಕೆ ಇವನು ಲೀಲಾಜಾಲವಾಗಿ ವ್ಯಾಖ್ಯೆ ಮಾಡುತ್ತಾನಲ್ಲದೆ ನಮ್ಮ

'ವಾಕ್ಯವಜ್ರ' ಗ್ರಂಥವನ್ನು ಕರತಲಾಮಲಕ ಮಾಡಿಕೊಂಡಿದ್ದಾನೆ. ಚಕ್ರವರ್ತಿ ಲಕ್ಷಣಗಳುಳ್ಳ ನಮ್ಮ ಯತಿರಾಜ, ಈ ರಾಷ್ಟ್ರವನ್ನುದ್ಧರಿಸಲು ಬಂದಿರುವ ಮಹಾಪುರುಷ. ಅವನೇ ನಮ್ಮ ದೇವರನಾಮಗಳ ಭಂಡಾರಿ. ನಾವು ಭಗವತ್ಪ್ರೇರಣೆಯಿಂದ ಯಾವದೋ ಕಾಲದಲ್ಲಿ ಹಾಡುವ ದೇವರನಾಮ ಗಳನ್ನು ಯತಿರಾಜ ಬರೆದಿಟ್ಟುಕೊಂಡು, ಭಾಗವತ ಸೇವೆಯ ಕಾಲದಲ್ಲಿ ಸುಂದರವಾಗಿ ಹಾಡುತ್ತಾನೆ. ಅವನು ಹಾಡುವುದನ್ನು ಕೇಳುತ್ತ ಕೇಳುತ್ತ 'ನಮ್ಮ ಬರವಣಿಗೆ ಸುಂದರವಾಗಿದೆಯೋ, ಯತಿರಾಜನ ಶ್ರೀಕಂಠ ಅದಕ್ಕೆ ಪುಟಗೊಟ್ಟು ಸುಂದರವಾಗಿ ಕಾಣಿಸುತ್ತದೆಯೋ' ಎಂದು ನಾವೇ ಅಚ್ಚರಿ ಪಡುತ್ತೇವೆ."

"ಶಿಷ್ಯಂದಿರ ಮೇಲೆ ತಮ್ಮ ಕರುಣೆಯೆಷ್ಟು – ಕೃಪೆಯೆಷ್ಟು ಗುರು ದೇವಾ."

"ಶಿಷ್ಯಂದಿರೇ ನಮ್ಮ ಪ್ರಾಣ ನಾಯಕಾ – ಪಾಂಡವರೇ ನನ್ನ ಪ್ರಾಣ ಎಂದು ಭಗವಂತ ಹೇಳಿದ; ಶಿಷ್ಯಂದಿರೇ ನನ್ನ ಪ್ರಾಣ ಎಂದು ನಾವು ಹೇಳುತ್ತೇವೆ."

"ನಾಳೆಯಿಂದ ಭಾಗವತಸೇವೆ ಆರಂಭಿಸಬಹುದಲ್ಲ – ತಮ್ಮ ಸದು ಪ್ರದೇಶ, ಯತಿರಾಜರ ಸ್ತೋತ್ರಪಾಠ ಕೇಳಿ ನಾನೂ ನನ್ನ ಪ್ರಜರೂ ಪುನೀತರಾಗುತ್ತೇವೆ."

"ಅಗತ್ಯವಾಗಿ ಆಗಬಹುದು."

"ನಾಳೆ ತಾವು ಶಿಷ್ಯ, ಪರಿವಾರಸಮೇತ ಅರಮನೆಗೆ ದಯೆಮಾಡಿಸಿ, ಪಾದಪೂಜೆ ಒಪ್ಪಿಸಿಕೊಂಡು, ನನ್ನನ್ನು ಆಶೀರ್ವದಿಸಬೇಕು."

ಎಂದು ಶ್ರೀರಂಗಮಾಂಬೆ ಪ್ರಾರ್ಥಿಸಲು, ಅವ್ಯಾಜಕರುಣಾಮೂರ್ತಿ ಗಳಾದ ಗುರುದೇವರು.

"ಅಮ್ಮಾ – ನೀನು ನನ್ನ ಮಗಳೂ ಹೌದು; ತಾಯಿಯೂ ಹೌದು. ಗುರುವಿಗೇ ಶಿಷ್ಯರೇ ಮಕ್ಕಳು – ಆದರೆ ನೀನು ಆದಿಮಹಾಲಕ್ಷ್ಮಿಯ ಅವತಾರ. ಲೋಕಮಾತೆಯ ಕನಿಷ್ಠಪುತ್ರನಲ್ಲವೇ ನಾನು – ಬಹು ಸಂತೋಷವಾಗಿ ನನ್ನ ತವರುಮನೆಗೆ ಬರುತ್ತೇನೆ ತಾಯಿ" ಎಂದರು.

ಯತಿರಾಜ ಬಂದು.

ಹಲವು ಜೀವಧರಿಸಿ ಹಸಿದು ಕುಳಿತಿರುವಾಗ ನಾವು ಈ ಭಿಕ್ಷೆ ಸ್ವೀಕರಿಸುವುದು ಹೇಗೆ ?"

"ತಾವು ಚಂದ್ರಗಿರಿಯಲ್ಲಿರುವವರೆಗೂ ಸಮಸ್ತರಿಗೂ ಇದೇ ಭೋಜನವಾಗಲು ವ್ಯವಸ್ಥೆ ಮಾಡಿದ್ದೇನೆ ಗುರುದೇವಾ. ನರಸಿಂಹನಾಯಕನು ಜೀವಂತನಾಗಿರುವವರೆಗೆ ಯಾವ ಹುಲುಪ್ರಾಣಿಯೂ ಹಸಿವಿನಿಂದ ನರಳಬೇಕಾಗಿಲ್ಲ."

"ನೀನು ಧನ್ಯನಪ್ಪಾ – ಧನ್ಯ. ಇನ್ನು ನಾವು ನಿಶ್ಚಿಂತೆಯಿಂದ ಭಿಕ್ಷೆ ಸ್ವೀಕರಿಸುತ್ತೇವೆ – ಶ್ರೀಕೃಷ್ಣಾರ್ಪಣಮಸ್ತು" ಎಂದರು.

'ಚಂದ್ರಮಹಲು' ತಾತ್ಕಾಲಿಕವಾಗಿ ಶ್ರೀಮಠವಾಯಿತು. ತ್ರಿಕಾಲ ಪೂಜೆ, ಭಾಗವತಸೇವೆ, ಅನ್ನ ಸಂತರ್ಪಣೆ ಅವಿಚ್ಛಿನ್ನವಾಗಿ ನಡೆಯುತ್ತಿತ್ತು.

ನಾಯಕರು, ಶ್ರೀರಂಗಮಾಂಬಾ ದಿನಕ್ಕೊಮ್ಮೆಯಾದರೂ ಶ್ರೀಶ್ರೀಗಳವರನ್ನು ದರ್ಶಿಸಿ ವಿಚಾರ ವಿನಿಮಯ ಮಾಡುತ್ತಿದ್ದರು. ಶ್ರೀಶ್ರೀಗಳವರು ತಮ್ಮ ಅಮರವಾಣಿಯಿಂದ ವೇದಾಂತ ತತ್ತ್ವಗಳ ರಹಸ್ಯವನ್ನು ಶಿಷ್ಯರಿಗೆ ಉಪದೇಶಿಸುತ್ತಿದ್ದರು.

ಭಾರತದ ಧರ್ಮಜಾಗೃತಿ, ಕಾಲಕಾಲಕ್ಕೆ ಭಾರತಧರ್ಮದ ಮೇಲೊದಗಿದ ಆಘಾತಗಳು, ಅದನ್ನು ತನ್ನ ಧೀಶಕ್ತಿಯಿಂದ ಭಾರತ ಎದುರಿಸಿದ ಬಗೆಯನ್ನು ವಿವರಿಸುತ್ತಾ ಒಂದು ದಿನ ಶ್ರೀಗುರುಗಳು,

"ನೀನು ವಿಜಯನಗರ ಬಿಟ್ಟು ಬರಬಾರದಾಗಿತ್ತು ನರಸಿಂಹನಾಯಕ-ವಿರೂಪಾಕ್ಷರಾಯರನ್ನು ಸಿಂಹಾಸನಕ್ಕೇರಿಸಿ ನೀನು ತಪ್ಪುಮಾಡಿದೆ."

"ಅಂದಿನ ವಿರೂಪಾಕ್ಷರಾಯರು ಇಂದಿನ ವಿರೂಪಾಕ್ಷರಾಯರಲ್ಲ ಗುರುದೇವಾ. ಮಲ್ಲಿಕಾರ್ಜುನರಾಯರ ದೌರ್ಬಲ್ಯದಿಂದ ವಿಜಯನಗರ ಎಲ್ಲಿ ಶತ್ರುವಶವಾಗುವುದೋ ಎಂದು ಹೆದರಿ, ನಾನು ವಿರೂಪಾಕ್ಷರಾಯರಿಗೆ ಸಹಾಯಮಾಡಿದೆ. ಈಗ ಪಶ್ಚಾತ್ತಾಪಪಡುತ್ತಿದ್ದೇನೆ. ಮಲ್ಲಿಕಾರ್ಜುನರಾಯರು ಸಾಮರ್ಥ್ಯಶಾಲಿಗಳಲ್ಲದಿದ್ದರೂ ದುಷ್ಟರಲ್ಲ – ಸ್ವಂತ ವಿಚಾರ ಮಾಡುವ ಶಕ್ತಿಯೇ ಇಲ್ಲದಿರುವ ವಿರೂಪಾಕ್ಷರಾಯರು ಕ್ರೌರ್ಯದಿಂದ ತಮ್ಮ ದುರ್ಬಲತೆಯನ್ನು ಮುಚ್ಚಿಕೊಳ್ಳಲೆತ್ನಿಸುತ್ತಿದ್ದಾರೆ."

"ದುರ್ದೈವವಶಾತ್ ವಿಜಯನಗರದ ಹಿಂದುಗಳು ಕೈಬಿಟ್ಟು ಹೋದರೆ, ಭಾರತವರ್ಷದಲ್ಲಿ ಹಿಂದೂತ್ವವೇ ನಾಶಹೊಂದುತ್ತದೆ. ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯರಾದ ಶ್ರೀಶ್ರೀ ವಿದ್ಯಾರಣ್ಯ ಮಹಾಮುನಿಗಳು ಅಪ್ಪಣೆ ಕೊಡಿಸಿರುವಂತೆ 'ಪಂಚಾಶದುತ್ತರಶತೇ ವಂಶಪೂರ್ತಿರ್ಭವಿಷ್ಯತಿ' – ವಿರೂಪಾಕ್ಷರಾಯರ ಕಾಲಕ್ಕೆ ಸಂಗಮವಂಶ ಕೊನೆಗಾಣುತ್ತದೆ. ಭವಿಷ್ಯತ್ತು

ಎಲ್ಲಿ ಬಹಮನಿಯವರ ಕೈವಶವಾಗುವುದೋ ಎಂಬ ಭೀತಿ ನಮ್ಮನ್ನಾವರಿಸಿದೆ."

"ಅದಕ್ಕೆ ನಾನು ಅವಕಾಶಕೊಡುವುದಿಲ್ಲ. ಭಟಕಳದ ಪ್ರಕರಣ ಅಲ್ಲಿಗೇ ಪರ್ಯವಸಾನ ಹೊಂದುವುದಿಲ್ಲ. ನನ್ನ ಬೇಹುಗಾರರಿಂದ ಸುದ್ದಿ ಬಂದಿರುವಂತೆ, ಭಟಕಳದ ಹತ್ಯಾಕಾಂಡದಲ್ಲಿ ಅಳಿದುಳಿದವರು ಗೋವೆ, ಕುಲ್ಬುರ್ಗಿ ಸೇರಿದ್ದಾರೆ. ಅವರು ಬಹಮನಿ ಸುಲ್ತಾನರನ್ನು ಯುದ್ಧಕ್ಕೆ ಪ್ರೇರೇಪಿಸುವುದರಲ್ಲಿ ಯಾವ ಸಂದೇಹವೂ ಇಲ್ಲ. ವಿಜಯನಗರದ ಪ್ರತಿಕ್ರಿಯೆ ನೋಡಿಕೊಂಡು ನಾನು ಮುನ್ನುಗ್ಗಬೇಕೆಂದಿದ್ದೇನೆ. – ಬಹಮನಿಯುವರು ವಿಜಯನಗರದೊಳಗೆ ಕಾಲಿಡಲು ಅವಕಾಶಕೊಡುವುದಿಲ್ಲವೆಂದು ನಾನು ಆಶ್ವಾಸನಕೊಡಬಲ್ಲೆ ಗುರುದೇವಾ. ಶ್ರೀ ವಿದ್ಯಾರಣ್ಯ ಮಹರ್ಷಿಗಳ ಮಹದ್ಕಾರ್ಯ ವಿರೂಪಾಕ್ಷರಾಯರಿಂದ ನಿಸ್ವಾರ್ಥಕವಾಗುವ ಸಂದರ್ಭ ಒದಗಿದರೆ, ನಾನೇ ಕೈಯಾರ ವಿರೂಪಾಕ್ಷರಾಯರನ್ನು ಗಾದಿಯಿಂದಿಳಿಸಿ, ದಕ್ಷರಾದವರನ್ನು ನೇಮಿಸುತ್ತೇನೆ."

"ಶ್ರೀಭುವನೇಶ್ವರಿ ನಿನಗೆ ಮಂಗಳವನ್ನುಂಟುಮಾಡಲಿ."

ಎಂದು ಗುರುದೇವರು ಹರಸಿದರು.

ಸಂಜೆಯ ಸಭೆ ವಿದ್ವತ್ಪೂರ್ಣವಾದ ಧರ್ಮ ಸಭೆಯಾಗುತ್ತಿತ್ತು.

ವೇದಿಕೆಯ ಮೇಲೆ ಶ್ರೀಗುರು ಶ್ರೀಪಾದರಾಜರಿಗೆ ಸಿಂಹಾಸನವೇರ್ಪಡಿಸಲಾಗಿತ್ತು ; ಅದರ ಬುಡದಲ್ಲಿ ನರಸಿಂಹನಾಯಕರ ಪೀಠ.

ದೇಶದ ವಿವಿಧ, ವರ್ಣ, ಮತ, ಧರ್ಮಗಳ ವಿದ್ವಜ್ಜನರು ತಮ್ಮ ವಿಚಾರಗಳನ್ನು ಮಂಡಿಸಲು ಅವಕಾಶ ಕಲ್ಪಿಸಿಕೊಡಲಾಗಿತ್ತು. ಅಂದಿನ ತತ್ವ ಮಂಥನವನ್ನು ಕ್ರೋಢಿಕರಿಸಿ, ಶ್ರೀಗುರುಗಳು ಉಪದೇಶಮಾಡುತ್ತಿದ್ದರು. ಕೊನೆಯಲ್ಲಿ ಯತಿರಾಜ ಭಾಗವತಸೇವೆ ನಡಸಿ ಎಲ್ಲರನ್ನೂ ಆನಂದಗೊಳಿಸುತ್ತಿದ್ದ.

ಒಂದು ದಿನ ಗೋದಾವರಿ ತೀರದಿಂದ ಬಂದಿದ್ದ ನಾರಾಯಣಭಟ್ಟನೆಂಬ ಅದ್ವೈತ ಪಂಡಿತ ತಾನು ರಚಿಸಿದ ಅದ್ವೈತ ಮಕರಂದ ಗ್ರಂಥದ ಮೇಲೆ ಉದ್ದಾಮ ಪ್ರವಚನ ಮಾಡಿದ. ಅವನ ಪಾಂಡಿತ್ಯವನ್ನು ಮೆಚ್ಚಿಕೊಂಡ ಗುರುದೇವರು.

"ವಿದ್ವದ್ವಿರಾಜಮಾನರಾದ ನಾರಾಯಣ ಪಂಡಿತರು ಅದ್ವೈತ ಮತ ಪ್ರತಿಪಾದನೆಯೊಂದಿಗೆ ದ್ವೈತಮತ ಖಂಡನೆಯನ್ನೂ ಮಾಡಿದ್ದಾರೆ. ದ್ವೈತಾದ್ವೈತ ಸಮರ ವಿನಾಕಾರಣ ಜನರಲ್ಲಿ ಅನೈಕಮತ್ಯವನ್ನು ಹುಟ್ಟಿಸಿ, ವೈಮನಸ್ಯವನ್ನು ತಂದೊಡ್ಡುತ್ತಿದೆ. ಪ್ರಾಜ್ಞರು ಇದಕ್ಕೆ ಅವಕಾಶಕೊಡಬಾರದು. **'ಏಕಂ ಸತ್ ವಿಪ್ರಾ ಬಹೂಧಾ ವದಂತಿ'** ಎಂಬ ಉಪನಿಷತ್ತಿನ ಮಹಾವಾಕ್ಯವನ್ನು ನಾವು ಸ್ಮೃತಿಪಥದಲ್ಲಿಟ್ಟುಕೊಂಡರೆ ದ್ವೈತಾದ್ವೈತ ಘರ್ಷಣೆಗೆ ಅವಕಾಶವೇ ಇರುವುದಿಲ್ಲ. ದ್ವೈತಿಗೆ ಯಾವನು ಶ್ರೀಮನ್ನಾರಾಯಣನಾಗಿದ್ದಾನೋ ಅವನೇ ಅದ್ವೈತಿಗೆ ಬ್ರಹ್ಮನಾಗಿದ್ದಾನೆ. ಬ್ರಹ್ಮ, ವಿಷ್ಣು, ಮಹೇಶ್ವರ ಒಂದೇ ಶಕ್ತಿಯ ಮೂರು ಮುಖವಲ್ಲವೇ? – ಸರಸ್ವತಿ, ಲಕ್ಷ್ಮಿ, ಪಾರ್ವತಿಯರು ಪರಾಪ್ರಕೃತಿಯ ಅಭಿವ್ಯಕ್ತಿಗಳಲ್ಲವೇ? ಬ್ರಹ್ಮ, ವಿಷ್ಣು, ಮಹೇಶ್ವರರು ವ್ಯಕ್ತಿಗಳೆಂದು ಭಾವಿಸುವುದು ತಪ್ಪು,

> **'ಅಯೇ, ಜಗತಿ ವಿಜಯತೇ ಕೇವಲಂ ಶಾರದಾಯಾಮೇವ ಹೃದ್ಯ ನಿಖಿಲವಿದ್ಯಾ, ಭಾರ್ಗವ ಏವ ಪ್ರತಿಭಟ ಪ್ರತಿಭಯಾಪ್ರತಿಭಾ ಧಿಷಣವಮಾಪ್ರಹತಮೋ ದುರಮುದಾವದಾವದತಾ. ವಿಕರ್ತನ ಏವ ವಿಸ್ಮಾಪಿತ ತೇಜಃ ಪ್ರಪಂಚಸ್ಸುಧಾಕರ ಏವ ಸಕಲಜನಮನಃಪ್ರೀಣನಂ ನೈಪುಣ್ಯಂ, ವಿಭಾವಸಾವೇವ ವಿಶ್ವಾಸಿತ ಲೋಕ ಬುದ್ಧಿ ಶುದ್ಧಿರ್ಮೇದಿನೀ ಧರಾಧಿಪತ್ಶ್ಯಂಗ ಏವ ವಿಶೇಷ ಧೌರಂಧರ್ಯಂ, ಮಂದಾರ ಮಹೀರುಹ ವನಾನಸ್ಯ ಸಾಮಾನ್ಯಾವ ದಾನ್ಯತಾ ಭಗವತಿ ವಾಸುದೇವ ಏವ ವಿಚಿತ್ರಾಣಿ ಚರಿತ್ರಾಣಿ"*'**

* 'ಲೋಕದಲ್ಲಿ ಒಂದೊಂದು ಸರ್ವೋತ್ಕೃಷ್ಟ ಗುಣಗಳು ಒಬ್ಬೊಬ್ಬರಲ್ಲಿರಬಹುದು; ಎಲ್ಲ ಗುಣಗಳೂ ಒಬ್ಬರಲ್ಲಿರುವುದು ಅತಿ ವಿರಳ: ಸಕಲ ವಿದ್ಯೆಗಳನ್ನೂ ಶಾರದೆಯಲ್ಲಿ ನೋಡಬಹುದು; ಶತ್ರುಗಳನ್ನೆದುರಿಸುವ ಪರಾಕ್ರಮವನ್ನು ಭಾರ್ಗವನಲ್ಲಿ ನೋಡಬಹುದು; ಬುದ್ಧಿ ಕುಶಲತೆಯನ್ನು ಬೃಹಸ್ಪತಿಯಲ್ಲಿ ಕಾಣಬಹುದು; ಪ್ರಕಾಶವನ್ನು ಸೂರ್ಯನಲ್ಲಿ ನೋಡಬಹುದು; ಆಹ್ಲಾದಕತ್ವವನ್ನು ಚಂದ್ರನಲ್ಲಿ ಕಾಣಬಹುದು; ಪಾವಿತ್ರ್ಯವನ್ನು ಅಗ್ನಿದೇವನಲ್ಲಿ ನೋಡಬಹುದು: ಧೈರ್ಯವನ್ನು ಪರ್ವತರಾಜನಲ್ಲಿ ನೋಡಬಹುದು; ಔದಾರ್ಯವನ್ನು ಕಲ್ಪವೃಕ್ಷದಲ್ಲಿ ಕಾಣಬಹುದು; ವಿಚಿತ್ರ ಚರ್ಯೆಗಳನ್ನು ವಾಸುದೇವನಲ್ಲಿ ಅವಲೋಕಿಸಬಹುದು – ಸಿನ್ನಲ್ಲಾದರೋ ಸರ್ವಗುಣಗಳೂ ಸಂಪೂರ್ಣವಾಗಿರುವವು.'

ಸರ್ವಗುಣೋಪೇತವಾದ ಶಕ್ತಿಯಾವದಿದೆಯೋ ಅದೇ ಭಗವಂತ – ಹರನೆಂದರೂ ಅವನೇ, ಹರಿಯೆಂದರೂ ಅವನೇ !

ದ್ವೈತ – ಅದ್ವೈತ, ವಿಭಿನ್ನ ಮತಗಳಲ್ಲ. ಅವು ಆತ್ಮೋನ್ನತಿಯ ವಿವಿಧ ಗತಿಗಳಷ್ಟೆ ! ನನಗಿಂತ ಭಗವಂತ ದೊಡ್ಡವನು – ಕರ್ಮಕಾಸಾರದಲ್ಲಿ ಬಿದ್ದು ನಾನು, ಹುಟ್ಟು ಸಾವುಗಳ ಚಕ್ರವಿಭ್ರಮಣಕ್ಕೆ ಸಿಲುಕಿ ಪರಿಪರಿ ಬವಣೆಗೊಳಗಾಗಿದ್ದೇನೆ. ಆವನು ಕರ್ಮಾತೀತನಾಗಿದ್ದಾನೆ ಕರ್ಮಪಂಕದಲ್ಲಿ ಬಿದ್ದು ಪರಿತಪಿಸುತ್ತಿರುವ ಪಶುವನ್ನು ಕೈಹಿಡಿದು ಮೇಲಕ್ಕೆತ್ತಲು ಸಮರ್ಥನಾಗಿದ್ದಾನೆ. ಷಡ್ಭಕ್ತಿ ಮಾರ್ಗದಲ್ಲಿ ನಾವು ಅನುಸಂಧಾನಮಾಡಿ, ಅವನನ್ನು ಅರಿಯಬೇಕು. ಶ್ರೀಮದ್ಭಾಗವತ ಹೇಳುವಂತೆ !

" ಯತ್ಕೀರ್ತನಂ ಯತ್ಸ್ಮರಣಂ ಯದೀಕ್ಷಣಂ
ಯದ್ವನ್ದನಂ ಯಚ್ಛ್ರವಣಂ ಯದರ್ಹಣಮ್
ಲೋಕಸ್ಯ ಸದ್ಯೋ ವಿಧುನೋತಿ ಕಲ್ಮಷಮ್
ತಸ್ಮೈ ಸುಭದ್ರಶ್ರವಸೇ ನಮೋ ನಮಃ ||

ನಿರ್ವಿಕಾರ ಭಕ್ತಿಭಾವದಿಂದ ಭಕ್ತ ಭಗವತ್ – ಸಾನಿಧ್ಯ ಸೇರುತ್ತಾನೆ.

ಈ ಘಟ್ಟವನ್ನು ಪ್ರತಿಯೊಬ್ಬ ಸಾಧಕನೂ ದಾಟಲೇಬೇಕು. ಪ್ರೋಜ್ಜ್ವಲ ಜ್ಞಾನಿಗಳಾದ ಆಚಾರ್ಯ ಶ್ರೀಶ್ರೀ ಶಂಕರರೂ ಮಹಾ ಭಕ್ತರೆನ್ನುವುದು ಅವರ ನೂರಾರು ಸ್ತೋತ್ರಗಳಿಂದ ವ್ಯಕ್ತಪಟ್ಟಿದೆ. ಭಕ್ತಿ ಜ್ಞಾನದ ಹೆಬ್ಬಾಗಿಲು ; ಆ ಬಾಗಿಲು ದಾಟಕೊಂಡು ಹೋದಮೇಲೆಯೇ ಚಿತ್ತ್ರಕಾಶ ದರ್ಶನ. ಸದಾ ಸರ್ವದಾ ಭಗವಂತನ ಧ್ಯಾನ, ಮನನ, ಚಿಂತನಗಳಲ್ಲಿ ಲೀನನಾಗುವವನು ಭಗವಂತನ ವಿರಾಟ ಶಕ್ತಿಯಲ್ಲಿ ಅವಿಷ್ಟನಾಗುತ್ತಾನೆ."

ಎಂದು ಹೇಳುತ್ತಾ ನಾರಾಯಣ ಭಟ್ಟನ ಕಡೆ ತಿರುಗಿ,

" ದ್ವೈತಾದ್ವೈತಗಳ ನಡುವೆ ಇರುವ ಅಂತರ ಎಷ್ಟು ಕಿರಿದಾದುದು ಕಂಡಿರಾ ಪಂಡಿತರೇ " ಎಂದರು.

ನಾರಾಯಣಭಟ್ಟ ವಿನೀತನಾಗಿ,

" ನಾನು ಪಂಡಿತವಕ್ಕಿ - ತಾವು ಭಗವದ್ಸ್ವರೂಪಿಗಳು – ನನಗೆ ಹೊಸ ಕಣ್ಣನ್ನೇ ತಾವು ಅನುಗ್ರಹಿಸಿರುವಿರಿ " ಎಂದ.

ಶ್ರಿಶ್ರೀಗಳವರು, ಯತಿರಾಜನ ಕಡೆ ತಿರುಗಿ,
" ಯತಿ – ಭಾಗವತಸೇವೆ ಆರಂಭವಾಗಲಿ " ಎಂದರು.

ನಗರದ ಭಕ್ತಮಂಡಳಿ ಭಜನೆಮಾಡಿದ ಮೇಲೆ, ಗುರುಗಳೆದುರು ಕೈಮುಗಿದು ಅನನ್ಯ ಭಕ್ತಿಭಾವದಿಂದ ನಿಂತ ಯತಿರಾಜ ದಿವ್ಯವಾಣಿಯಿಂದ ಆರಂಭಿಸಿದ.

" ಭೃಂಗ - ನಿನ್ನಟ್ಟಿದನೇ ಶ್ರೀ
ರಂಗ ಮಧುರೆಲಿ ನಿಂದು
ಅಂಗಜ ಲುಬ್ಧಕ ಪೊಂಗಳಲ ತಡೆಯಸಿಕ್ಕಿ
ಹಿಂಗಿಸುತ್ತೈದಾನೆ ಅಸುವ ಹೇ ಕಿತವ ||ಪ||

ನಿನ್ನ ನೋಡೆನವ್ಮ ಅಚ್ಯುತನ್ನ ಕಂಡಂತಾಯಿತಯ್ಯ
ಚೆನ್ನಿಗರರಸ ಕುಶಲೋನ್ನತಿಯಲಿಹನೇನೋ
ಚಿಣ್ಣತನ ಮೊದಲಾಗವನ್ನ ಬಲ್ಲೆವೊಕಿತವ
ಗನ್ನಗಾರ ಚಿತ್ತಚೋರನ್ನ ಶ್ರೀಹರಿಯ
ಮನ್ನಣೆಗೆ ಮೆಚ್ಚಿ ತನ್ನುವನೊಪ್ಪಿಸಿದ ಮುಗುಧ
ಪೆಣ್ಣುಗಳ ವಿರಹಾಬ್ಧಿಯನ್ನೀ ದಾಟಿಸುವನೆಂದು
ತನ್ನ ನೇಹವೆಂಬ ನಾವೆಯನ್ನೇರಿಸಿ ನಡು ನೀ
ರಿನ್ನೊಳು ತೋರದ್ದೋದನೆ ಹೇ ಕಿತವ ||೧||

ನಮ್ಮ ನಂದಗೋಪ ಯಶೋದಮ್ಮನ ಕಂಡು ಬಾರೆಂದು
ರಮೆಯರಮಣ ನಿನ್ನ ಒಮ್ಮೆ ಕಳುಹಿದನೇನೊ
ಹಮ್ಮುಗೆಟ್ಟ ರಮಣೀರೆಂದುನ್ಮುಳಿಸಿದೆವೊ ವೃಥಾ
ನಮ್ಮ ಹಂಬಲಿನ್ನೇನವಗೆ ಶ್ರೀಹರಿಗೆ
ಹೊನ್ನಮ್ಮಲಟ್ಟದ ಲಂಬೆಯಗಮ್ಮನೇರ ಕುಚದ ಕುಂ
ಕುಮ ಕಸ್ತೂರಿಯ ಕರದಿಮ್ಮನದಿ ಸಿಲುಕಿದಂಗೆ
ಕಮ್ಮಗೋಲ ಬಾಣಂಗಳು ಎಷ್ಟು ಘಾಯಗೊಳಿಸುತಿವೆ
ಸುಮ್ಮನೆ ಬಾಹೋದು ಸುಲಭವೆ ಹೇ ಕಿತವ ||೨||

ಮಧುಕುಂಜ ವನದಲ್ಲಿ ಮಧುವೈರಿ ಕೊಳಲಲೂದಲಾ
ಮಧುರ ಸುಸ್ವರ ಕೇಳಿ ಮದಿರಾಕ್ಷಿಯರೆಲ್ಲ ಧಾ
ಮದಧ್ಯಾನ ಬಿಟ್ಟು ಮೃಗಮದಗಂಪ ವಿಡಿದೈದಿ
ಮದನನೈಯನ ಕಾಣುತ್ತ ಶ್ರೀಹರಿಯು
ಮದವೇರಿ ತಲೆಗಾಗಿ ಮೇದಿನಿನಿಟ್ಟಿಸಲಾಗ
ಮೃದುವಾಕ್ಯದೆಮ್ಮನಪ್ಪಿ ಅಧರಾಮೃತ ಭೋಜನ
ಕೊದಗುವಸತತ ಸನ್ನದ್ಧ ನಮ್ಮಗಲಿ ಕ
ಲ್ಲೆದೆಯಾದನೆಂತೊ ಕೃಪಾಳು ಹೇ ಕಿತವ ||೩||

ವಜ್ರಾಂಕುಶ ಧ್ವಜಾಂಕಿತ ಹೆಜ್ಜೆಯನ್ನೆ ತಿಳಿದ ನ
ಮ್ಮಬ್ಜಾಕ್ಷಿಯರೊಡನೆ ರತಿಕಜ್ಜದುಪವನದಲ್ಲಿ
ನಿರ್ಜರೋತ್ತಂಸರೊಡನೆ ಮಜ್ಜನಕ್ರೀಡ್ಯಾಡುವ ಸಾ
ಯುಜ್ಯ ಸುಖವೆತ್ತಲಿಹುದೋ ಶ್ರೀಹರಿಯು
ಅಬ್ಜಭವ ಮುನಿಜನ ಪೂಜ್ಯನಗಲಿದಮೇಲೆ
ನಿರ್ಜೀವಿಗಳಾಗಿ ಕಣ್ಣ ಕಜ್ಜಲ ಕಲಕಿಕೊಂಡು
ಲಜ್ಜೆಗೆಟ್ಟು ತನುವತಿ ಜರ್ಝರಿತದಿ ಜೀವಿಸೆ
ವಜ್ಜರ ಎದೆಯಲ್ಲವೇ ನಮ್ಮದೆ ಹೇ ಕಿತವ ||೪||

ಉತ್ಪಲ ಶಾಮಲವೋದವೆತ್ತ ಭಾವ ಚಿನ್ನದಿಂದ
ಅತ್ಯಮಲ ಪೊನ್ನಾಂಬರ ಸುತ್ತಿದಡಾ
ಮತ್ತಾನೂಪುರ ಝಣತ್ಕಾರದಿ ಮಿಂಚುವ
ಚಿತ್ರಶಿಖಿಗೆ ಮೇಘನಂತೊಪ್ಪುವ ಶ್ರೀಹರಿಯು
ಹೆತ್ತತಾಯಿ ಆಪ್ತ ಬಂಧು ಗೋತ್ರಗತಿ ನೀನೆ ನಮ್ಮ
ಚಿತ್ತವೆಂದು ನಂಬಿ ತನ್ನ ಹತ್ತಿಲಿ ಸಾರಿದವರ
ಒತ್ತಿ ತಾ ರಥವನ್ನೇರಿ ಸತ್ವರ ಬರುವೆನೆಂದು
ಮತ್ತೆ ಅಕ್ರೂರನೊಡನೈದಿದ ಹೇ ಕಿತವ ||೫||

ಕತ್ತಲೆ ವೈರಿಯ ಬಟ್ಟು ಮುತ್ತಿನ ಜೊಲ್ಲೆದುರುಬಿಲಿ
ಕಸ್ತೂರಿ ತಿಲಕ ಉಜ್ವಲ ಕುಂಡಲ ಬೆಳಗೆ
ವೃತ್ತ ವದನದಿ ಮಂದಸ್ಮಿತ ತಿಂಗಳಿಂದಲೆಮ್ಮ
ಹೃತ್ತಾಪ ಪರಿಹರಿಸು ಶ್ರೀಹರಿಯೆ
ಮತ್ತೆ ವಕ್ಷದ ಶ್ರೀವತ್ಸ ಕೌಸ್ತುಭ ವೈಜಯಂತಿಮಾಲೆ
ಶ್ರೀತುಳಸಿ ಘಮಘಮಿಸುತ್ತಲಿಹ ವನಮಾಲೆ
ರತ್ನನ ಕಂಕಣ ಭುಜಕೀರ್ತಿಯಿಂದೊಪ್ಪುವ ಪುರು
ಷೋತ್ತಮನ್ನ ಬಣ್ಣಿಪರುಂಟೇ ಹೇ ಕಿತವ ||೬||

ಲಕ್ಷುಮಿ ರಮಣ ನವಸೂಕ್ಷ್ಮದ ಗೊಲ್ಲತಿಯರು ನಾವು
ಕುಕ್ಷಿಯೊಳು ಬೊಮ್ಮಂಡವಗೆ ಮಕ್ಷಿಕಗಳಂತೆ ನಾವು
ಮೋಕ್ಷಿಗಳರಸನವ ಗೋಕ್ಷೀರವ್ರತರಾವು
ಲಕ್ಷಿಸುವನೆಂತೊ ನಮ್ಮನು ಶ್ರೀಹರಿಯು
ರಕ್ಷಿಸಲುದಿಸಿ ಜನರಕ್ಷಣೆಗೆ ಪಾಲ್ಬೆಣ್ಣೆಯು
ಭಕ್ಷಿಸಿ ನಿರುತ ನಮ್ಮ ಅಕ್ಷಿಗೆ ಹಬ್ಬವನುಣಿಸಿ
ಈಕ್ಷೋಣಿ ಭಾರಹಾರಿ ಯಮಶಿಕ್ಷೆಗೆ ನರರ ಸೌಮ್ಯ
ವಕ್ಷಮಾಣರಾದೆವೊ ಮೂರ್ಖರೋ ಹೇ ಕಿತವ ||೭||

ಹಿಂದೆ ಮಾಡಿದ ಸದ್ಧರ್ಮದಿಂದ ಮಥುರಾನಗರ
ದಿಂದೀವರಾಕ್ಷಿಯರಾನಂದ ಸಿಂಧು ಉದಿಸಿದ ಪೂರ್ಣ
ಚಂದ್ರನಂತೊಪ್ಪುವ ಸಿರಿ ಮಂಥರಘರ ನಂಘ್ರಿಯ
ತೊಂದುವ ಭಾಗ್ಯಕ್ಕೆಣೆಯುಂಟೆ ಶ್ರೀಹರಿಯ
ಅಂದೆಮ್ಮೊಳು ರಾಸಕ್ರೀಢೆಯಿಂದ ಬಂದಪರಾಧವ
ಒಂದನೆಣಿಸದೆ ಸಲಹೆಂದು ಬಿನ್ನೈಸಿ ಸಾಷ್ಟಾಂಗ
ದಿಂದ ವಂದಿಪೆವೊ ಭಕ್ತಬಂಧುವಿಗೆ ಎಮ್ಮ ಹೃದಯ
ಮಂದಿರದೊಳೆಂದೆಂದಿರೆಂದು ಹೇ ಕಿತವ ||೮||

ಹೆಂಗಳೆರೊಂದಾಗಿ ಅಂತರಂಗದರಸ ಮಾಡಿದ

ಮಂಗಳ ಚರಿತ್ರೆಯನ್ನು ಸಂಗೀತದಿಂ ಪೊಗಳುತ್ತ
ಕಂಗಳಶ್ರುಗರೆವುತ್ತ ಇಂಗಿತಜ್ಞ ಶ್ರೀಹರಿಯ
ಮಂಗಳ ವೇದಸ್ತೇಯನಾರಿ ಶೃಂಗಾರ ಕೂರುಮನು
ಪೊಂಗಣ್ಣ ಶೀಳ್ದ ನರಸಿಂಗನಟು ಭಾರ್ಗವನು
ಅಂಗದ ಪಾರ್ಥ ಶಂಭು ತುರಂಗವ ರಂಗವಿಠಲ
ತುಂಗಮಹಿಮ ನಮೋಯೆಂಬೆವೋ ಹೇ ಕಿತವ ॥೯॥

ಯತಿರಾಜನ ಸೇವೆ ಮುಗಿದಮೇಲೆ ಶ್ರೀಶ್ರೀಗಳವರು ಬಹಿರ್ಮುಖರಾಗಿ ಮಹಾಮಂಗಳಾರತಿಯಾಗಲು ಅಪ್ಪಣೆ ದಯೆಪಾಲಿಸಿದರು.

ಮಹಾಮಂಗಳಾರತಿ, ಪ್ರಸಾದ ವಿನಿಯೋಗಾನಂತರ ಸಭೆ ಮುಕ್ತಾಯವಾಯಿತು.

---

ಶ್ರೀ ಶ್ರೀಪಾದರಾಜಕೃತ " ಭ್ರಮರಗೀತಾ "

# ೧೨

ಸುಲ್ತಾನ ಅಲ್ಲಾವುದ್ದೀನನ ನಿಧನಾನಂತರ (೧೪೫೮) ಬಹಮನಿ ಗಾದಿಯೇರಿದ ಹುಮಾಯೂನ್ ಮೂರೇ ವರ್ಷ ಆಳಿದ; ಅವನ ತರುವಾಯ ಗಾದಿಯೇರಿದ ನಿಜಾಂ, ಎರಡೇ ವರ್ಷ ಆಳಿ ಕಾಲವಶನಾಗಲು, ಮಹಮದ್ ೧೪೬೩ ರಲ್ಲಿ ಬಹಮನಿರಾಜ್ಯದ ಸುಲ್ತಾನನಾದ.

ಬಹಮನಿ ರಾಜ್ಯದಲ್ಲಿದ್ದ ಮುಸಲ್ಮಾನರು ದಖನಿಕಕ್ಷಿ, ವಿದೇಶೀಕಕ್ಷಿ ಎಂದು ಇಬ್ಭಾಗವಾಗಿ ಪರಸ್ಪರ ದ್ವೇಷ ಸಾಧಿಸುತ್ತಿದ್ದರು. ಆಗಿಂದಾಗ್ಗೆ ಅವರಲ್ಲಿ ಕಲಹವಾಗಿ ಉಭಯ ಪಕ್ಷಗಳವರೂ ಸಾವು ನೋವುಗಳಿಗೀಡಾಗುತ್ತಿದ್ದರು. ರಾಜಮಹಲಿನ ಒಳಜಗಳ, ಪಿತೂರಿ ರಾಜ್ಯದ ಬಿಕ್ಕಟ್ಟನ್ನು ಸಡಿಲಿಸಿತ್ತು. ಸುಲ್ತಾನಷಾಹಿಯ ದೌರ್ಬಲ್ಯ ಕಂಡುಕೊಂಡು ಸಾಮಂತರು ಸ್ವತಂತ್ರರಾಗಲೆಳಸುತ್ತಿದ್ದರು. ಬಹಮನಿ ರಾಜಮನೆತನದ ಗುಲಾಮನಾಗಿದ್ದು, ಸ್ವಸಾಹಸದಿಂದ ವಿಜಾಪುರದ ರಾಜಪ್ರತಿನಿಧಿಯಾದ ಯೂಸುಫ್ ಅದಿಲ್ ಖಾ಼ ಬಲಿಷ್ಠನಾಗಿ, ಬಹಮನಿಯ ನೊಗವನ್ನಿಳುಹಲು ಸಮಯ ಕಾಯುತ್ತಿದ್ದ.

ಬಹಮನಿ ರಾಜ್ಯ ನುಚ್ಚುನೂರಾಗದಂತೆ ಅದರ ಭದ್ರತೆಯನ್ನು ಕಾಯುತ್ತಿದ್ದವನು ವಜೀರನಾಗಿದ್ದ ಮಹಮದ್ ಗವಾನ್. ಮಹಾವೀರನೂ, ಮಹಾಪುರುಷನೂ ಆಗಿದ್ದ ಮಹಮದ್ ಗವಾನನನ್ನು ಸುಲ್ತಾನ್ ಮಹಮದ್ 'ದೊಡ್ಡಣ್ಣ' ನೆಂದು ಭಾವಿಸಿ ಗೌರವಿಸುತ್ತಿದ್ದ.

ಉತ್ತರದ ದಿಲ್ಲಿ ಪಾದಶಾಹಿಗಿಂತಲೂ ದಕ್ಷಿಣದ ಬಹಮನಿ ಪಾದಶಾಹಿ ದೇಶವಿದೇಶಗಳಲ್ಲಿ ಹೆಸರಾಗಿತ್ತು. ಬಹಮನಿ ಸುಲ್ತಾನರು ಸಿರಿಯಾ, ಪರ್ಶಿಯಾ, ಅರೇಬಿಯಾ, ತುರ್ಕಸ್ಥಾ಼, ಕಾಂದಹಾರ್, ಕಾಬೂಲ್, ಮಿಸರ್ ಮೊದಲಾದ ದೇಶಗಳೊಂದಿಗೆ ವ್ಯಾಪಾರ ಸಂಪರ್ಕವಿಟ್ಟುಕೊಂಡಿದ್ದುದರಿಂದ ಆ ದೇಶಗಳಲ್ಲಿ ಬಹಮನಿರಾಜ್ಯದ ಹೆಸರು ಸುಪರಿಚಿತವಾಗಿತ್ತು.

ಬಹಮನಿ ರಾಜ್ಯದ ಸಂಪದ್ಸಮೃದ್ಧಿಯ ಬಗ್ಗೆ ಕೇಳುತ್ತಿದ್ದ ಹೊರಗಿನ

ಜನ ವಲಸೆ ಬಂದು ಬಹಮನಿ ರಾಜ್ಯದಲ್ಲಿ ನೆಲಸಿದ್ದರು. ಹಾಗೆ ವಲಸೆ ಬಂದವರಲ್ಲಿ ಪರ್ಶಿಯಾದ ಗುಲಾಂ ಮಹಮದ್ ಗವಾನ್ ಖಾಜಾ ಅಮರುದ್ದೀನನೂ ಒಬ್ಬನಾಗಿದ್ದ. ಗವಾನ್ ಚಿಕ್ಕವಯಸ್ಸಿನವನಾಗಿದ್ದಾಗಲೇ ಅವನ ತಂದೆ ಖಾಜಾ ಮಹಮದ್ ತೀರಿಕೊಂಡದ್ದರಿಂದ, ಚಿಕ್ಕಪ್ಪ ಖಾಜಾ ಶಂಷುದ್ದೀನನ ಆಶ್ರಯದಲ್ಲಿ ಬೆಳೆಯಬೇಕಾಯಿತು.

ಗಿಲಾನ್ ರಾಜ್ಯದ ಸುಲ್ತಾನ ಮಹಮದನಿಗೆ ಶಂಷುದ್ದೀನ್ ವಜೀರನಾಗಿದ್ದ. ಅವನು ಗವಾನನಿಗೆ ಯೋಗ್ಯ ಶಿಕ್ಷಣ ಕೊಡಿಸಿದುದಲ್ಲದೆ, ರಾಜ್ಯನಿರ್ವಹಣ ತಂತ್ರವನ್ನು ತಾನೇ ಅಭ್ಯಾಸ ಮಾಡಿಸಿದ. ಗಿಲಾನ್ ರಾಜ್ಯಕ್ಕೆ ಕಂದಾರಿಯವರಿಂದ ವಿಪರೀತ ತೊಂದರೆಯಾಗುತ್ತಿರಲು, ಅವರನ್ನು ಮಟ್ಟ ಹಾಕುವುದಕ್ಕೆ ಗವಾನನನ್ನೇ ಸೈನ್ಯಸಮೇತ ಸುಲ್ತಾನ ಕಳಿಸಿಕೊಟ್ಟ. ಗವಾನ್ ಕಂದಾರಿಯವರ ಪುಂಡಾಟವನ್ನು ಅಡಗಿಸಿದ್ದಲ್ಲದೆ, ಅವರ ಮುಖಂಡನಾದ ಹಾಜಿ ಮಹಮದನನ್ನು ಕೈಸೆರೆ ಹಿಡಿದು ತಂದು ಒಪ್ಪಿಸಿದ. ಇದರಿಂದ ಗವಾನನಿಗೆ ಸೈನ್ಯಾಧಿಕಾರ ಪ್ರಾಪ್ತವಾಯಿತು.

ಸುಲ್ತಾನನಿಗೂ ಗವಾನನಿಗೂ ಕೆಲವು ಕಾಲ ಸ್ನೇಹ, ವಿಶ್ವಾಸ ಚೆನ್ನಾಗಿತ್ತು. ಆದರೆ ಯಾರೋ ಪಿಶುನರು ಸುಲ್ತಾನನ ಕಿವಿ ಹಿಂಡಿ, ಅವನ ಮನಸ್ಸು ಕೆಡಿಸಿಬಿಟ್ಟರು.

'ದೊರೆ ಮುನಿದರೆ ನಾಡೊಳಗಿರಬಾರದು' ಎಂದು ಬೇಸತ್ತು ಗಿಲಾನ್ ಬಿಟ್ಟು ಹೊರಟ, ಗವಾನ್ ವ್ಯಾಪಾರ ಮಾಡಿಕೊಂಡು ಉದರಂಭರಣ ಮಾಡಿಕೊಳ್ಳಲಾರಂಭಿಸಿದ. ಆದರವನು ಕೇವಲ ವ್ಯಾಪಾರ, ಹಣ ಸಂಪಾದನೆಯಲ್ಲೇ ನಿಮಗ್ನನಾಗಲಿಲ್ಲ. ಹೋದ ಹೋದ ಎಡೆಗಳಲ್ಲಿ ಸತ್ಪುರುಷರ ಸೇವೆ ಮಾಡುವುದು, ವಿದ್ವಾಂಸರು, ಕವಿಗಳು, ದಾರ್ಶನಿಕರೊಂದಿಗೆ ವಿಚಾರ ವಿನಿಮಯ ಮಾಡುವುದು, ಬಡವರಿಗೆ ಉದಾರ ಸಹಾಯ ನೀಡುವುದು ಅವನ ವಿಧಿಯಾಯಿತು.

ಗವಾನ್ ಊರುಬಿಟ್ಟ ಎರಡು ವರ್ಷಗಳ ತರುವಾಯ ಅವನ ಚಿಕ್ಕಪ್ಪ ಶಂಷುದ್ದೀನ್, ತನ್ನ ಮಗ ಖಾಜಾ ಮೊಹಿಯುದ್ದೀನನಿಗೆ ವಜೀರ ಕೆಲಸ ಒಪ್ಪಿಸಿ, ಮೆಕ್ಕಾಕ್ಕೆ ಯಾತ್ರೆ ಹೊರಟುಹೋದ. ಮೊಹಿಯುದ್ದೀನ್ ಬಹಳಕಾಲ ತನ್ನ ಅಧಿಕಾರ ಉಳಿಸಿಕೊಳ್ಳಲಿಲ್ಲ. ಎರಡೇ ವರ್ಷ

ಗಳಲ್ಲಿ ಅವನೂ ಬೇಸತ್ತು ಮೆಕ್ಕಾಕ್ಕೆ ಹೊರಟುಹೋದ.

ದೇಶಪರ್ಯಟನ ಮಾಡಿಕೊಂಡು ಗವಾನನೂ ಮೆಕ್ಕಾಕ್ಕೆ ಬಂದ. ಅವನ ಕೀರ್ತಿ ಮೆಕ್ಕಾದಲ್ಲಿ ವಿಸ್ತರಿಸಲು ಬಹಳಕಾಲ ಹಿಡಿಯಲಿಲ್ಲ. ಅರಬ್ ಸ್ಥಾನದ ಸುಲ್ತಾನ ತನ್ನ ರಾಜ್ಯದ ವಜೀರ ಪದವಿಯನ್ನು ಒಪ್ಪಿಕೊಳ್ಳ ಬೇಕೆಂದು ಗವಾನನನ್ನು ಪ್ರಾರ್ಥಿಸಿದ. ರಾಜಕಾರಣದ ಸವಿಕಂಡಿದ್ದ ಗವಾನ್ ಸುಲ್ತಾನನ ಪ್ರಾರ್ಥನೆಯನ್ನು ನಿರಾಕರಿಸಿ, ಮತ್ತೆ ಪ್ರವಾಸ ಆರಂಭಿಸಿದ.

ಅವನು ಪ್ರವಾಸದಲ್ಲಿದ್ದಾಗ ಬಹಮನಿ ರಾಜ್ಯದ ಖ್ಯಾತಿ ಕಿವಿಯಮೇಲೆ ಬೀಳಲು, ಹಡಗು ಹತ್ತಿ ಹಿಂದೂಸ್ಥಾನಕ್ಕೆ ಬಂದ. ಬಹಮನಿ ರಾಜ್ಯದ ಸುಲ್ತಾನನಾಗಿದ್ದ ಅಲ್ಲಾವುದ್ದೀನ್ ಗವಾನನ ಪಾಂಡಿತ್ಯ, ಲೋಕಾನುಭವ, ನಿಷ್ಕಳಂಕ ಜೀವನಕ್ಕೆ ಮಾರುವೋಗಿ ಅವನ ಸ್ನೇಹ ಬೆಳಸಿದುದಲ್ಲದೆ, ಆಸ್ಥಾನದ ಭಕ್ಷಿಯನ್ನಾಗಿ ನೇಮಿಸಿದ. ಅಲ್ಲಾವುದ್ದೀನನ ತರುವಾಯ ಗಾದಿಯ ನ್ನೇರಿದ ಹುಮಾಯೂನನೂ ಗವಾನನ ಬಗ್ಗೆ ಪ್ರೀತ್ಯಾದರಗಳನ್ನು ತಳೆದಿದ್ದ. ಅವನಿಗೆ ಅವಸಾನಕಾಲ ಪ್ರಾಪ್ತವಾಗಲು ಹೆಂಡತಿಯನ್ನೂ, ಎಂಟು ವರ್ಷ ವಯಸ್ಸಿನ ಮಗ ನಿಜಾಮನನ್ನೂ ಹತ್ತಿರ ಕರೆದು,

" ಗವಾನನನ್ನೇ ಮುಖ್ಯ ವಜೀರನನ್ನಾಗಿ ಮಾಡಿಕೊಳ್ಳಿ. ನಮ್ಮಕ್ ಹರಾಮಿಗಳು ತುಂಬಿರುವ ನಮ್ಮ ರಾಜ್ಯದಲ್ಲಿ ಗವಾನನೊಬ್ಬನೇ ಪ್ರಾಮಾಣಿಕ, ವಂತ."

ಎಂದು ಹೇಳಿ ಅಲ್ಲಾನ ಪಾದ ಸೇರಿದ.

ಚಾಣಾಕ್ಷಳಾದ ಹುಮಾಯೂನನ ಹೆಂಡತಿ ಮುಖ್ದುಮಾ ಜಿಹಾ಼ ಎಳೆಯಮಗನ ಪ್ರತಿನಿಧಿಯಾಗಿ ರಾಜ್ಯವಾಳಲಾರಂಭಿಸಿದ್ದಲ್ಲದೆ, ಗವಾನನನ್ನೇ ಮುಖ್ಯ ವಜೀರನನ್ನಾಗಿ ನೇಮಿಸಿಕೊಂಡಳು.

ಗವಾನ್ ಮುಖ್ಯ ವಜೀರನಾದ ಕೆಲವು ದಿನಗಳಲ್ಲೇ ಒರಿಸ್ಸಾ ದೊರೆಯೂ, ಮಾಳವ ದೇಶದ ಮಹಮದ್‌ಷಹ ಖಿಲ್ಜಿ ಬಹಮನಿಯ ಮೇಲೆ, ದಂಡೆತ್ತಿ ಬಂದರು. ಗವಾನ್ ಗುಜರಾತಿನ ದೊರೆಯ ಮೈತ್ರಿ ಬೆಳಸಿ, ಅವನಿಂದ ಎಂಭತ್ತು ಸಾವಿರ ರಾಹುತರ ಪಡೆಯನ್ನು ತರಿಸಿ, ಶತ್ರುಗಳನ್ನೆದುರಿಸಲು ಸಿದ್ಧನಾದ. ಒರಿಸ್ಸಾ ದೊರೆ, ಖಿಲ್ಜಿ ಇಬ್ಬರೂ ಭಯ ಗ್ರಸ್ತರಾಗಿ ಓಡಿಹೋದರು.

ದುರ್ದೈವಿಯಾದ ನಿಜಾಂಷಹ, ತನ್ನ ವಿವಾಹದ ದಿನವೇ ಮೃತ್ಯುವಶನಾಗಲು, ಅವನ ತಮ್ಮ ಮಹಮುದ್ ಗಾದಿಯನ್ನೇರಿದ. ಅಂಥ ದುರ್ಭರ ಪ್ರಸಂಗದಲ್ಲಿ ಗವಾನ್ ಮೈಯೆಲ್ಲಾ ಕಣ್ಣಾಗಿ, ಬಹಮನಿರಾಜ್ಯದ ಅಸ್ತಿತ್ವವನ್ನು ಕಾಪಾಡಿದ. ಗವಾನ್‌ನ ಸೇವಾನಿಷ್ಠೆಯನ್ನು ಮೆಚ್ಚಿಕೊಂಡ ಬೇಗಂ ಸುಲ್ತಾನಾ, ಅವನಿಗೆ ' **ಖಾಜಾ ಜಿಹಾನ್** ' ಎಂಬ ಬಿರುದನ್ನಿತ್ತಳು.

ಬಹಮನಿ ರಾಜ್ಯದ ಗಾದಿಯ ಮೇಲೆ ಕುಳಿತಿದ್ದವನು ಮಹಮುದನಾದರೂ ಸಮಸ್ತ ಅಧಿಕಾರವನ್ನೂ ನಿರ್ವಹಿಸುತ್ತಿದ್ದವನು ಗವಾನನೇ. ರಾಜ್ಯದ ಆರ್ಥಿಕ ಸ್ಥಿತಿಯನ್ನು ಸುಧಾರಿಸಿ, ರಾಜ್ಯದ ನಾಲ್ಕು ಜಿಲ್ಲೆಗಳನ್ನು *, ಎಂಟು ಜಿಲ್ಲೆಗಳಾಗಿ ** ಪರಿವರ್ತಿಸಿ, ಒಂದೊಂದು ಜಿಲ್ಲೆಗೂ ಒಬ್ಬ ' ತರಫ್‌ದಾರ ' ನನ್ನು ನೇಮಿಸಿ, ರಾಜ್ಯಭಾರ ಸುಸೂತ್ರವಾಗಿ ನಡೆಯಲು ಅಸ್ತಿಭಾರ ಹಾಕಿದ.

ಈ ವಿಭಜನೆಯಿಂದ ದೇಶಕ್ಕೆ ಕ್ಷೇಮವಾಯಿತಾದರೂ, ಗವಾನನಿಗೆ ಒಳ್ಳಿತಾಗಲಿಲ್ಲ.

ಒರಂಗಲ್ಲು ಇಬ್ಭಾಗವಾಗಲು, ಅದರ ಅಧಿಕಾರಿಯಾಗಿದ್ದ ನಿಜಾಮನ ಅಧಿಕಾರವ್ಯಾಪ್ತಿ ಕಡಿಮೆಯಾಯಿತು. ಅವನು ಗವಾನನ ಮೇಲೆ ದ್ವೇಷ ಸಾಧಿಸುತ್ತಾ ಸೇಡು ತೀರಿಸಿಕೊಳ್ಳಲು ಸಮಯ ಕಾಯುತ್ತಿದ್ದ.

ಭಟ್ಕಳದ ಹತ್ಯಾಕಾಂಡದಿಂದ ಪಾರಾಗಿ, ಕಲ್ಬುರ್ಗಿ ಸೇರಿದ್ದ ಮುಸಲ್ಮಾನ ವರ್ತಕರನ್ನು ನಿಜಾಮ ಉದ್ರೇಕಗೊಳಿಸಿ ಸುಲ್ತಾನನ ಬಳಿಗೆ ಕಳಿಸಿಕೊಟ್ಟ.

ವರ್ತಕರ ಹೃದಯವಿದ್ರಾವಕ ಕಥೆ ಕೇಳಿದ ಸುಲ್ತಾನ ರೊಚ್ಚಿಗೆದ್ದು, " ವಿಜಯನಗರವನ್ನು ಧೂಳೀಪಟ ಎಬ್ಬಿಸಿ ಭೂಮಿಯ ಮೇಲೆ

* ಕಲ್ಬುರ್ಗಿ, ದೌಲತ್ತಾಬಾದ್, ತೆಲಂಗಾಣ್ಯ, ಬೀದರ್.

** ಕಲ್ಬುರ್ಗಿಯನ್ನೊಡೆದು, ೧. ವಿಜಾಪುರ, ರಾಯಚೂರು, ಮುದಗಲ್ಲು ಸೇರಿದ ಒಂದು ಜಿಲ್ಲೆ; ೨. ಹಸ್ನಾಬಾದ್, ನಳದುರ್ಗ, ಸೊಲ್ಲಾಪುರಗಳನ್ನೊಳಗೊಂಡ ಒಂದು ಜಿಲ್ಲೆ ; ೩. ದೌಲತಾಬಾದ್ ; ೪. ಕೊಂಕಣ, ಗೋವ, ಬೆಳಗಾಂವಿಗಳನ್ನೊಳಗೊಂಡ ಒಂದು ಜಿಲ್ಲೆ ; ರಾಜಮುಂದಿರ, ನಲ್ಲಗೊಂಡ, ಒರಿಯ ಸೇರಿದ ಒಂದು ಜಿಲ್ಲೆ ; ೭. ಓರಂಗಲ್ಲು ; ಗಾವೇಲು ; ೮. ಮಾಹೂರು ಜಿಲ್ಲೆ

ಒಂದು ಹಿಂದೂ ಪಿಳ್ಳೆಯೂ ಇಲ್ಲದಂತೆ ಮಾಡಿಬಿಡಬೇಕು."

ಎಂದು ಆರ್ಭಟಿಸಿದ.

"ಈ ವೀರನಿರ್ಧಾರವನ್ನು ಕಾರ್ಯೋನ್ಮುಖಮಾಡುವ ಬಗೆಯನ್ನು ತಾವಂದಿರು ಆಲೋಚಿಸಿರುವರೇ ?"

ಎಂದು ಗವಾ೯ ಪ್ರಶ್ನಿಸಿದ.

"ಯೋಚಿಸಿದ್ದೇನೆ. ನಮ್ಮ ಸಕಲ ಸೈನ್ಯವನ್ನೂ ತೆಗೆದುಕೊಂಡು ಹೋಗಿ ವಿಜಯನಗರವನ್ನು ಮುತ್ತುವುದು - ವಿರೂಪಾಕ್ಷರಾಯ ಶರಣು ಬಂದರೂ ಅವನನ್ನು ಜೀವದೊರಸೆ ಬಿಡಬಾರದು. ಹಿಂದೂಗಳ ರಕ್ತನದಿಯಲ್ಲಿ ಮಿಂದಲ್ಲದೆ ನನ್ನ ಆತ್ಮಕ್ಕೆ ಶಾಂತಿಯಿಲ್ಲ."

"ವಿಜಯನಗರವನ್ನು ವಶಪಡಿಸಿಕೊಳ್ಳುವುದು ಅಷ್ಟು ಸುಲಭವಾಗಿಲ್ಲ ಹುಜೂರ್. ನಾವು ಕೋಪಾವಿಷ್ಟರಾಗಿ ವ್ಯುತ್ಯ್ಯದವಡೆ ಸೇರುವುದು ವಿಹಿತವಲ್ಲ. ಭಟಿಕಳದಲ್ಲಿ ನಡೆದಿರುವ ಅನ್ಯಾಯಕ್ಕೆ ಪ್ರತೀಕಾರ ಕೈಗೊಳ್ಳಬೇಕೆನ್ನುವ ವಿಷಯದಲ್ಲಿ ನನ್ನ ಭಿನ್ನಾಭಿಪ್ರಾಯವಿಲ್ಲ. ಆದರೆ ಅದನ್ನು ಸಾಧಿಸುವ ಬಗೆ ಹೇಗೆ ಎನ್ನುವದನ್ನು ಪರ್ಯಾಲೋಚಿಸಬೇಕು."

"ನೀವೇನು ಯೋಚಿಸುತ್ತಿರುವಿರಿ - ಹೇಳಿ."

"ಸದ್ಯಕ್ಕೆ ನಾವು ವಿಜಯನಗರ ಮುತ್ತುವುದು ಬೇಡ - ವಿಜಯನಗರಕ್ಕೆ ಅಧೀನವಾಗಿರುವ ರಾಜ್ಯಗಳನ್ನು ವಶಪಡಿಸಿಕೊಂಡರೆ, ವಿಜಯನಗರದ ಬಲ ತಾನಾಗಿಯೇ ಕುಗ್ಗುತ್ತದೆ. ತರುವಾಯ, ನಾವು ಸಮಯ ಸಾಧಿಸಿ, ವಿಜಯನಗರದ ಮೇಲೆ ಬೀಳಬೇಕು. ಅಲ್ಲದೆ...."

"ಅಲ್ಲದೆ........!"

"ನನಗೆ ಸುದ್ದಿ ಬಂದಿರುವಂತೆ ವಿರೂಪಾಕ್ಷರಾಯರು ಜನಪ್ರಿಯರಾಗಿಲ್ಲ. ಮದ್ಯ, ಮಾನಿನಿಯರಲ್ಲಿ ಸದಾ ಮೈಮರೆತಿರುವ ಈ ದೊರೆ ವಿಜಯನಗರದಂಥ ಮಹಾಸಾಮ್ರಾಜ್ಯ ರಕ್ಷಿಸಲು ಅಸಮರ್ಥನಾಗಿದ್ದಾನೆ. ವಿರೂಪಾಕ್ಷರಾಯನ ರೀತಿ, ನೀತಿಗಳನ್ನು ಮೆಚ್ಚದೆ ಸಾಳುವ ನರಸಿಂಹ ನಾಯಕರು, ಚಂದ್ರಗಿರಿ ಸೇರಿ ಪ್ರತಿಸರ್ಕಾರ ಸ್ಥಾಪಿಸಿದ್ದಾರೆ. ನಾವು ಉಪಾಯಾಂತರದಿಂದ ಸಾಳುವ ನರಸಿಂಹರ ಮೈತ್ರಿ ಬೆಳಸಿದರೆ ವಿಜಯನಗರ ಲೀಲಾಜಾಲವಾಗಿ ನಮ್ಮ ಕೈಸೇರುತ್ತದೆ."

" ಸಾಳುವ ನರಸಿಂಹನಾಯಕರು ಒಪ್ಪಬೇಕಲ್ಲ ;"

" ಅವರು ಒಪ್ಪುವ ಸಂಭವವಿದೆ. ವಿರೂಪಾಕ್ಷರಾಯರನ್ನು ಕಿತ್ತೊಗೆದು, ನಿಮ್ಮನ್ನೇ ವಿಜಯನಗರದ ಸಿಂಹಾಸನದ ಮೇಲೆ ಕೂಡಿಸುತ್ತೇವೆ – ನೀವು ನಮ್ಮ ಮಾಂಡಲಿಕರಾಗಿ, ಕಪ್ಪಕಾಣಿಕೆ ಒಪ್ಪಿಸುತ್ತ ಬಂದರೆ ಸಾಕು ಎಂದು ನಾವು ಸೂಚಿಸಿದರೆ ನರಸಿಂಹನಾಯಕರು ಒಲ್ಲೆ ಎನ್ನಲಾರರು."

ವಜೀರನ ಚಾಣಾಕ್ಷ ಬುದ್ಧಿಯನ್ನು ಮೆಚ್ಚಿಕೊಂಡ ಸುಲ್ತಾನ,

"ವಿಜಯನಗರದ ಗಡಿಗಳ ಮೇಲೆ ದಂಡೆತ್ತಿ ಹೋಗುವವರು ಯಾರು?"

" ಹುಜೂರರ ಅಪ್ಪಣೆಯಾದರೆ ನಾನೇ ಹೋಗುತ್ತೇನೆ."

" ಚಂದ್ರಗಿರಿಯ ಸಂಧಾನಕ್ಕೆ ನೀವು ಹೋಗಿದ್ದರೆ ಚೆನ್ನಾಗಿತ್ತು.!"

" ಚಂದ್ರಗಿರಿಗೆ ನಾನು ಹೋದರೆ ನಮ್ಮ ದೌರ್ಬಲ್ಯ ಪ್ರದರ್ಶಿಸಿದಂತಾಗುತ್ತದೆ. ಸಾಳುವ ನರಸಿಂಹನಾಯಕರು ನಮ್ಮ ಪಕ್ಷ ಸೇರಲಿ, ಬಿಡಲಿ ನಾವು ವಿಜಯನಗರವನ್ನು ಮಣಿಸಲು ಸಮರ್ಥರಾಗಿದ್ದೇವೆ ಎಂಬ ಭಾವನೆಯನ್ನುಂಟುಮಾಡಬೇಕು. ನಾನು ಹೋದರೆ – ಬಹಮನಿಯವರು ದುರ್ಬಲರಾಗಿದ್ದಾರೆ. ಅದಕ್ಕೇ ತಮ್ಮ ವಜೀರನನ್ನೇ ಸಂಧಾನಕ್ಕೆ ನಮ್ಮ ಬಳಿಗೆ ಕಳಿಸಿಕೊಟ್ಟರು ಎಂದು ನರಸಿಂಹನಾಯಕರು ಭಾವಿಸುತ್ತಾರೆ. – ಚಂದ್ರಗಿರಿಗೆ ಸಂಧಾನ ಚತುರ ಫರ್ಹಾತ್ ಖಾನ್ ಹೋಗಲಿ. ನರಸಿಂಹನಾಯಕರನ್ನು ಒಲಿಸಿಕೊಳ್ಳುವ ರೀತಿಯನ್ನು ನಾನು ಅವನಿಗೆ ತಿಳಿಸುತ್ತೇನೆ."

" ಫರ್ಹಾತ್‌ಖಾನ್ ಚಂದ್ರಗಿರಿಯಿಂದ ಹಿಂದಿರುಗಿದ ಮೇಲೆ ನೀವು ದಂಡಯಾತ್ರೆ ಹೋಗುವುದು ಒಳ್ಳೆಯದು."

" ಹೌದು – ಅವನ ಸಂಧಾನ ಸಫಲವಾದರೆ ನಾನು ದಂಡಯಾತ್ರೆ ಹೋಗುವ ಅಗತ್ಯವೇ ಇರುವುದಿಲ್ಲ. ಅವನು ಚಂದ್ರಗಿರಿಗೆ ಹೋಗಿ ಬರುವವರೆಗೆ ನಾನು ರಾಜಧಾನಿಯಲ್ಲೇ ಇರುತ್ತೇನೆ "

ಎಂದು ಆಶ್ವಾಸನವಿತ್ತ.

ಸ್ವತೀದ್ವಿ(?)ತಿಯರಾಗಿ, ಮಿತಪರಿವಾರದೊಂದಿಗೆ ವಿಜಯನಗರ ಬಿಟ್ಟು ಹೊರಟ ತಿಮ್ಮಣ್ಣ ದಣ್ಣಾಯಕರು ಶ್ರೀರಂಗಪಟ್ಟಣಕ್ಕೆ ಬಂದು ಶ್ರೀರಂಗ ನಾಥನ ದರ್ಶನ ಪಡೆದು, ಅಲ್ಲಿ ಮಹಾಸೇವೆಗಳನ್ನೆಲ್ಲಾ ಮಾಡಿಸಿ ಮೇಲು ಕೋಟೆ ಅಭಿಮುಖರಾದರು.

ಮೇಲುಕೋಟೆ ಶ್ರೀವೈಷ್ಣವ ಪಂಥದ ಮುಖ್ಯ ಪೀಠವಾಗಿತ್ತು. ವಿಶಿಷ್ಟಾದ್ವೈತ ಮತಸ್ಥಾಪಕರಾದ ಶ್ರೀಶ್ರೀ ರಾಮಾನುಜಾಚಾರ್ಯರು ಮೇಲುಕೋಟೆಯಲ್ಲಿ ಹದಿನಾಲ್ಕು ವರ್ಷ ವಾಸಿಸಿ ಅದರ ಕೀರ್ತಿಯನ್ನು ವಿಸ್ತರಿಸಿದ್ದರು. ಬೆಟ್ಟದ ಮೇಲಿರುವ ನರಸಿಂಹಸ್ವಾಮಿ, ಚೆಲುವರಾಯ ಸ್ವಾಮಿ ಇಬ್ಬರೂ ಮೇಲುಕೋಟೆಯ ಆರಾಧ್ಯ ದೇವರುಗಳು.

ಶ್ರೀರಾಮಾನುಜ ಯತಿಸಾರ್ವಭೌಮರು ದೇವಸ್ಥಾನ ಪ್ರವೇಶಿಸಿದಾಗ ದೇವತಾಮೂರ್ತಿ ಅದೃಶ್ಯವಾಗಿತ್ತಂತೆ. ವಿಚಾರಿಸುವಲ್ಲಿ ಮೇಲುಕೋಟೆಯನ್ನು ಕೊಳ್ಳೆ ಹೊಡೆದ ದಿಲ್ಲಿ ಸುಲ್ತಾನ, ಮೂರ್ತಿಯನ್ನು ತೆಗೆದುಕೊಂಡು ಹೋಗಿರುವುದಾಗಿ ತಿಳಿದುಬಂತು ಶ್ರೀರಾಮಾನುಜರು ಕೂಡಲೆ ದಿಲ್ಲಿಗೆ ಧಾವಿಸಿದರು. ಚೆಲುವಾಗಿದ್ದ ಮೂರ್ತಿಯನ್ನು ಕಂಡ ಸುಲ್ತಾನನ ಮಗಳು ಆಡುವುದಕ್ಕೆ ಅದನ್ನು ಬಯಸಿದಳಂತೆ. ಸುಲ್ತಾನ್ ವಿಗ್ರಹವನ್ನು ಮಗಳಿಗೆ ಕೊಟ್ಟುಬಿಟ್ಟ. ಸುಲ್ತಾನನ ಮಗಳಿಗೂ. ಚೆಲುವರಾಯಸ್ವಾಮಿ ಮೂರ್ತಿಗೂ ಮಧುರ ಮೈತ್ರಿ ಬೆಳೆಯಿತಂತೆ. ಶ್ರೀರಾಮಾನುಜರು ದಿಲ್ಲಿಗೆ ಬಂದು ಚೆಲುವರಾಯನ ಹೆಸರು ಹಿಡಿದು ಕೂಗಲು ಮೂರ್ತಿ ಬಂದು ಅವರ ತೊಡೆಯನ್ನೇರಿ ಕುಳಿತಿತು. ಯತಿವರ್ಯರು ಕೂಡಲೆ ಮೇಲುಕೋಟೆಗೆ ಹಿಂದಿರುಗಿ, ಮೂರ್ತಿಯನ್ನು ಸ್ವಸ್ಥಾನದಲ್ಲಿ ಸ್ಥಾಪಿಸಿದರು. ಚೆಲುವರಾಯನ ಅಗಲಿಕೆಯನ್ನು ಸಹಿಸಲಾಗದೆ ದಿಲ್ಲೀಶ್ವರನ ಮಗಳು ಕುದುರೆಯೇರಿ ಮೇಲುಕೋಟೆಗೆ ಬಂದು ತನ್ನ ಆರಾಧ್ಯ ದೇವನ ಹೃತ್ಕಮಲಗಳಲ್ಲಿ ಐಕ್ಯಳಾದಳು. ಈ ಮಹಾಭಕ್ತೆ ಬೀಬಿ ನಾಚ್ಚಿಯಾರ್ ಎಂಬ ಹೆಸರಿನಿಂದ ಮೇಲುಕೋಟೆಯಲ್ಲಿ ಪ್ರತಿಷ್ಠಾಪಿತಳಾಗಿದ್ದಾಳೆ.

ತಿಮ್ಮಣ್ಣನಾಯಕರು ಬರುವ ಸುದ್ದಿ ಮುಟ್ಟಲು ಸ್ವಾಮಿಯ ದೇವಾಲಯದ ಅಧಿಕಾರಿಗಳು, ಚಪ್ಪರಗಳನ್ನು ಹಾಕಿ, ವೈಭವಯುತ ಸ್ವಾಗತ ನೀಡಲು ಸಕಲ ಸಿದ್ಧತೆ ಮಾಡಿಕೊಂಡರು.

ನಿರಾಡಂಬರ ಮೂರ್ತಿಗಳಾದ ತಿಮ್ಮಣ್ಣ ದಣ್ಣಾಯಕರು, ಮೇಲು ಕೋಟೆಗೆ ಅನತಿದೂರದಲ್ಲಿದ್ದ ಹೊಳೆಯ ಬಳಿ ನಿಂತು, ಸ್ನಾನ ಆಹ್ನೀಕಗಳನ್ನು ತೀರಿಸಿಕೊಂಡು, ಭಗವನ್ನಾಮ ಸ್ಮರಣೆಮಾಡುತ್ತಾ ಸತಿಯೊಂದಿಗೆ ಸಾಮಾನ್ಯ ಯಾತ್ರಾರ್ಥಿಗಳಂತೆ ಮೇಲುಕೋಟೆ ಪ್ರವೇಶಿಸಿದರು.

ದೇವಾಲಯದ ಅಧಿಕಾರಿಗಳು ದಣ್ಣಾಯಕರೆಲ್ಲಿ ಎಂದು ಹುಡಕ ಲಾರಂಭಿಸಿದರು.

ಪೂಜೆ ಮುಗಿಸಿಕೊಂಡು ಹೊರ ಬಂದ ದಣ್ಣಾಯಕರು, ಭ್ರಾಂತರಾಗಿದ್ದ ಅಧಿಕಾರಿಗಳಿಗೆ ತಮ್ಮ ಪರಿಚಯ ಮಾಡಿಕೊಡಲು ಅವರು ಅವಾಕ್ಕಾದರು.

ಅಧಿಕಾರಿಗಳು ಮಾಡಿದ್ದ ವಿಶೇಷ ವ್ಯವಸ್ಥೆಯನ್ನೆಲ್ಲಾ ನಿರಾಕರಿಸಿದ ದಣ್ಣಾಯಕರು,

"ನಾನು ಮಂತ್ರಿಯಾಗಿ ಇಲ್ಲಿಗೆ ಬಂದಿಲ್ಲ. ಶ್ರೀ ಚೆಲುವರಾಯನ ದಾಸಾನುದಾಸನಾಗಿ ಬಂದಿದ್ದೇನೆ. ನನಗೇಕೆ ಮಾನಮರ್ಯಾದೆ ? ಅವೆಲ್ಲವೂ ಭಗವಂತನೊಬ್ಬನಿಗೇ ಸಮರ್ಪಿತವಾಗಬೇಕು."

ಎಂದು ಸಾಮಾನ್ಯ ಯಾತ್ರಾರ್ಥಿಗಳಂತೆ ಪಾಳುಮಂಟಪವೊಂದರಲ್ಲಿ ಬೀಡುಬಿಟ್ಟರು.

ಉಷಃಕಾಲಕ್ಕೇ ಏಳುತ್ತಿದ್ದ ದಂಪತಿಗಳು, ಪುಷ್ಕರಿಣಿಯಲ್ಲಿ ಮಿಂದು, ಶ್ರೀತುಲಸಿ, ಬಗೆಬಗೆಯ ಹೂಗಳನ್ನು ಸಂಗ್ರಹಿಸುತ್ತಿದ್ದರು.

ರಂಗಮಾಂಬಿಕೆ ಪುಷ್ಪಮಾಲೆ ಕಟ್ಟುತ್ತಿದ್ದಂತೆ, ತಿಮ್ಮಣ್ಣ ದಣ್ಣಾಯ ಕರು ಶ್ರೀಮದಾಚಾರ್ಯರ ಕೃತಿಗಳನ್ನೂ ವೇದಾಂತ ದೇಶಿಕರ ಕೃತಿಗಳನ್ನೂ ಪಾರಾಯಣ ಮಾಡುತ್ತಿದ್ದರು :

"ಪಿತರಂ ಮಾತರಂ ದಾರಾನ್ ಪುತ್ರಾನ್ ಬಂಧೂನ್ ಸಖೀನ್ ಗುರೂನ್ ।
ರತ್ನಾನಿ ಧನಧಾನ್ಯಾನಿ ಕ್ಷೇತ್ರಾಣಿ ಚ ಗೃಹಾಣಿ ಚ ॥

ಸರ್ವಧರ್ಮಾಂಶ್ಚ ಸಂತ್ಯಜ್ಯ ಸರ್ವಕಾಮಾಂಶ್ಚ ಸಾಕ್ಷರಾನ್ ।
ಲೋಕವಿಕ್ರಾಂತ ಚರಣಾ ಶರಣಂ ತೇ ವ್ರಜಂ ವಿಭೋ ॥*

ಅಪಾರ ಕರುಣಾಂಬುಧೇ, ಅನಾಲೋಚಿತ – ವಿಶೇಷಾಶೇಷ ಲೋಕ ಶರಣ್ಯ, ಪ್ರಣತಾರ್ತಿಹರ, ಆಶ್ರಿತವಾತ್ಸಲ್ಯೈಕ ಮಹೋದಧೇ, ಅನವರತ - ವಿದಿತ - ನಿಖಿಲ - ಭೂತಜಾತ - ಯತಾತ್ಮ್ಯ, ಸತ್ಯಕಾಮ, ಸತ್ಯಸಂಕಲ್ಪ, ಆಪತ್ಸಖ, ಕಾಕುತ್ಸ್ಥ, ಶ್ರೀಮನ್ನಾರಾಯಣ ಪುರುಷೋತ್ತಮ, ಶ್ರೀರಂಗನಾಥ, ಮಮನಾಥ, ನಮೋಸ್ತುತೇ." **

ಪಾರಾಯಣ ಮಾಡುತ್ತ ಮಾಡುತ್ತ ತಿಮ್ಮಣ್ಣ ದಣ್ಣಾಯಕರ ಕಣ್ಣುಗಳಿಂದ ಧಾರೆಯಿಳಿಯುತ್ತಿತ್ತು. ಅವರು ಗದ್ಗದಕಂಠರಾಗಿ,

" ಪ್ರಭೂ – ಯಾವಾಗ ನಿನ್ನ ದರ್ಶನ ಕೊಡುವೆ – ಯಾವಾಗ ನಿನ್ನ ತಿರುವಡಿಗಳಲ್ಲಿ ಈ ದಾಸಾನುದಾಸನಿಗೆ ಆಶ್ರಯ ಕೊಡುವೆ "

ಎಂದು ಅಂಗಲಾಚುವರು.

ಪೂಜಾ ಸಮಯಕ್ಕೆ ಸರಿಯಾಗಿ ದೇವಸ್ಥಾನಕ್ಕೆ ಹೋಗುತ್ತಿದ್ದ ತಿಮ್ಮಣ್ಣ ದಣ್ಣಾಯಕರು, ಪುಷ್ಪಮಾಲೆಯನ್ನು ಭಗವಂತನಿಗೆ ಸಮರ್ಪಿಸಿ, ಆ

---

* ಹೇ ವಿಭು, ತಂದೆ, ತಾಯಿ, ಮಡದಿಯರು, ಮಕ್ಕಳು, ಬಂಧುಗಳು, ಸ್ನೇಹಿತರು, ಗುರುಗಳು, ರತ್ನಗಳು, ಧನಧಾನ್ಯಗಳು, ಗದ್ದೆಗಳು, ಮನೆಗಳು, ಸರ್ವಧರ್ಮಗಳು, ಕೈವಲ್ಯವನ್ನು ಒಳಗೊಂಡ ಸರ್ವಕಾಮಗಳು – ಇವೆಲ್ಲವನ್ನು ಸಂಪೂರ್ಣವಾಗಿ ತೊರೆದು ಲೋಕಗಳನ್ನು ಅತಿಕ್ರಮಿಸಿದ ನಿನ್ನ ಪಾದಗಳನ್ನು ಶರಣು ಹೊಂದುತ್ತೇನೆ.

** " ಅಪಾರ ಕರುಣಾಸಾಗರ, ಆಶ್ರಯಿಸುವವರಲ್ಲಿ ಜಾತಿ, ಗುಣ, ವೃತ್ತಿ ಮೊದಲಾದ ಯಾವ ವಿಶೇಷಗಳನ್ನೂ ಆಲೋಚಿಸದೆಯೇ ಲೋಕಕ್ಕೆಲ್ಲಾ ಶರಣ್ಯನಾಗಿರುವವನೇ, ಪ್ರಣತರಾದವರ ದುಃಖಗಳನ್ನು ಹೋಗಲಾಡಿಸುವವನೇ, ಆಶ್ರಿತರಾದವರಿಗೆ ವಾತ್ಸಲ್ಯಗುಣದ ಅದ್ವಿತೀಯ ಜಲನಿಧಿಯಂತಿರುವವನೇ ಎಲ್ಲಾ ಪ್ರಾಣಿಸಮೂಹಗಳ ನಿಜಸ್ವಭಾವವನ್ನು ಯಾವಾಗಲೂ ಅರಿತಿರುವವನೇ, ಸತ್ಯಕಾಮ, ಸತ್ಯಸಂಕಲ್ಪ, ಆಪತ್ಸಖ, ಕಾಕುತ್ಸ್ಥ, ಶ್ರೀಮನ್ನಾನಾರಾಯಣ, ಶ್ರೀರಂಗನಾಥ, ನನ್ನ ಒಡೆಯ, ನಿನಗೆ ನಮಸ್ಕಾರ."

—ಯತಿರಾಜ ಶ್ರೀರಾಮಾನುಜಕೃತ 'ಶ್ರೀರಂಗ ಗದ್ಯಮ್.'

ದಿವ್ಯ ತೇಜೋಮೂರ್ತಿಯನ್ನು ಎವೆಯಿಕ್ಕದೆ ನೋಡುತ್ತ ನಿಲ್ಲುವರು.

ನಲವತ್ತೆಂಟು ದಿನಗಳು ಅವರ ಜೀವನ ಪೂಜೆ, ಪ್ರಾರ್ಥನೆ, ಪಾರಾಯಣಗಳಿಗೆ ಮೀಸಲಾಯಿತು.

ಊರಿನ ನೆನಪೇ ಮರೆತು ಹೋಯಿತು.

ಒಂದು ದಿನ ಸೇವಾಕಾರ್ಯ ಮುಗಿದ ಮೇಲೆ ರಂಗಾಂಬಿಕೆ,

" ನಾವು ಇಲ್ಲಿಗೆ ಬಂದು ನಲವತ್ತೆಂಟು ದಿನಗಳಾದವು. ಇನ್ನಾದರೂ ಊರಿಗೆ ಹೋಗಬೇಡವೇ? ಅನಿರ್ದಿಷ್ಟ ಕಾಲ ನಾವುಇಲ್ಲಿ ನಿಂತರೆ ದೊರೆಗಳಿಗೆ ಕೋಪಬರಬಹುದು."

" ಶೆಲ್ವಪುಳ್ಳೆ ಒಬ್ಬನೇ ನನ್ನ ದೊರೆ ರಂಗಾ – ಅವನ ಸೇವೆಯನ್ನಲ್ಲದೆ ನಾನು ಬೇರೆ ಯಾರ ಸೇವೆಯನ್ನೂ ಮಾಡುವುದಿಲ್ಲ."

ಎಂದು ವಿರೂಪಾಕ್ಷರಾಯರಿಗೆ ಪತ್ರ ಬರೆದು,

" ತನ್ನ ಸನ್ನಿಧಿ ಬಿಟ್ಟು ಹೋಗುವುದಕ್ಕೆ ಶ್ರೀ ಚೆಲುವನಾರಾಯಣ ಸ್ವಾಮಿ ಇನ್ನೂ ಅಪ್ಪಣೆಯಿತ್ತಿಲ್ಲ. ಅವನ ಅಪ್ಪಣೆ ದೊರೆಯುವವರೆಗೆ ನಾನು ಮೇಲುಕೋಟೆ ಬಿಡುವಂತಿಲ್ಲ. ಇದರಿಂದ ಮಹಾಪ್ರಭುಗಳಿಗೆ ತೊಂದರೆ ಯಾಗುವ ಹಾಗಿದ್ದರೆ ಮಂತ್ರಿ ಪದವಿಯಿಂದ ನನ್ನನ್ನು ನಿವೃತ್ತಿಗೊಳಿಸಿ, ಬೇರೆ ಯಾರನ್ನಾದರೂ ತೆಗೆದುಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ."

ತಮ್ಮ ಜತೆಯಲ್ಲಿ ಬಂದಿದ್ದ ಪರಿವಾರದವರ ಕೈಗಿತ್ತು, ಅವರನ್ನು ವಿಜಯನಗರಕ್ಕೆ ಕಳಿಸಿಬಿಟ್ಟರು.

ರಂಗಾಂಬಿಕೆ ಭವ್ಯವಾದ ಮಂಟಪ, ಪುಷ್ಕರಿಣಿ ಕಟ್ಟಿಸಿದುದಲ್ಲದೆ, ದೇವರ ಮೆರವಣಿಗೆಗೆ, ರತ್ನಖಚಿತವಾದ ಪಲ್ಲಕ್ಕಿಯನ್ನು ಮಾಡಿಸಿಕೊಟ್ಟಳು.

ತಿಮ್ಮಣ್ಣ ದಣ್ಣಾಯಕರು, ಒಂದು ಮಠ ಸ್ಥಾಪಿಸಿ, ವೇದವೇದಾಂಗ ಪಾರಂಗತರಾದ ಇಪ್ಪತ್ತುನಾಲ್ಕು ಬ್ರಾಹ್ಮಣರ ನಿತ್ಯ ಭೋಜನದ ವ್ಯವಸ್ಥೆ ಮಾಡಿದರು. ಮಠದ ಖರ್ಚುವೆಚ್ಚ ಪೂರೈಸಲು ವರ್ಷಕ್ಕೆ ನಾಲ್ಕುನೂರು ವರಾಹಗಳ ಉತ್ಪನ್ನವುಳ್ಳ ಭೂಮಿಯನ್ನು ಕೊಂಡು, ರಾಮಾನುಜೀಯರ ವಶಕ್ಕಿತ್ತರು.

ತಮ್ಮ ಸಮಸ್ತ ಸಂಪತ್ತನ್ನೂ ದಂಪತಿಗಳು ಭಗವಂತನ ಚರಣಗಳಿಗರ್ಪಿಸಿ, ಒಂದು ವರ್ಷಕಾಲ ಅನನ್ಯ ಸೇವೆಮಾಡಿ ಮೇಲುಕೋಟೆಯಲ್ಲಿಯೇ ವೈಕುಂಠವಾಸಿಗಳಾದರು.

# ೧೪

ಬಹಮನಿ ರಾಜ್ಯದ ರಾಯಭಾರಿಗಳಾಗಿ ಬಂದಿದ್ದ ಫರ್ಹಾತ್‌ಖಾನ್, ಶಹಬಾಜ್‌ಖಾನರನ್ನು ಈಶ್ವರನಾಯಕ ಸ್ವಾಗತಿಸಿ, ರಾಜೋಚಿತ ಆತಿಥ್ಯ ಏರ್ಪಡಿಸಿದ.

ಸಂಜೆಗೆ ಅರಮನೆಯಲ್ಲಿ ಬಹಮನಿ ರಾಯಭಾರಿಗಳಿಗೆ ನರಸಿಂಹ ನಾಯಕರು ದರ್ಶನವಿತ್ತರು.

ಔಪಚಾರಿಕ ಮಾತುಕತೆ ಮುಗಿಯಲು, ನಾಯಕರು,

" ಸುಲ್ತಾನರು ನಿಮ್ಮನ್ನಿಲ್ಲಿ ಕಳಿಸಿಕೊಡಬೇಕಾದರೆ ಮಹತ್ತ್ವದ ಕಾರ್ಯವೇ ಇರಬೇಕು. ಹೇಳಿ."

" ವಿಜಯನಗರದ ಸ್ಥಿತಿಗತಿ ತಮಗೆ ಗೊತ್ತೇ ಇದೆ ನಾಯಕರೇ. ದುರ್ಬಲರೂ, ವಿಷಯಾಸಕ್ತರೂ ಆದ ವಿರೂಪಾಕ್ಷರಾಯರು ರಾಜ್ಯವನ್ನು ಇಂದಲ್ಲ ನಾಳೆ ಕಳೆದುಕೊಳ್ಳುತ್ತಾರೆನ್ನುವ ವಿಷಯ ಖಾನಂದಿರಿಗೆ ಖಚಿತ ವಾಗಿದೆ. ಬಹಮನಿ ರಾಜ್ಯದ ಗುಲಾಮನಾಗಿದ್ದ ಯೂಸುಫ್ ಆದಿಲ್‌ಖಾನ್ ಈಗ ಪ್ರಬಲಿಸಿ, ವಿಜಾಪುರದಲ್ಲಿ ಸ್ವತಂತ್ರ ರಾಜ್ಯ ಸ್ಥಾಪಿಸುವ ಯೋಚನೆಯಲ್ಲಿ ದ್ದಾನೆ. ಅವನ ಕಣ್ಣೂ ವಿಜಯನಗರದ ಮೇಲಿದೆಯೆನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ - ಕಲ್ಬುರ್ಗಿಯಲ್ಲಿಯೇ ಇನ್ನೊಂದು ವಿಚಿತ್ರ ಪರಿಸ್ಥಿತಿ ಏರ್ಪಟ್ಟಿದೆ."

" ಏನದು ?"

" ವಿರೂಪಾಕ್ಷರಾಯರು ಭಟಕಳದ ಹತ್ತುಸಾವಿರ ಮುಸಲ್ಮಾನರನ್ನು ಕೊಲ್ಲಿಸಿದ ಸಂಗತಿ ತಮಗೆ ತಿಳಿದಿರಬಹುದು ?"

" ತಿಳಿದಿದೆ."

" ಅವರ ದಣ್ಣಾಯಕರ ಕೈಗೆ ಸಿಕ್ಕದೆ ತಪ್ಪಿಸಿಕೊಂಡವರು ಗೋವೆ, ಕಲ್ಬುರ್ಗಿಗೆ ಬಂದು ಸೇರಿಕೊಂಡರು. ಭಟಕಳದ ವಧಾವೃತ್ತಾಂತ ಅವರಿಂದ ಕೇಳಿದ ಕಲ್ಬುರ್ಗಿಯ ಜನ ಕುಪಿತರಾಗಿ, ವಿಜಯನಗರ ಮುತ್ತಲು ಸುಲ್ತಾನ ರನ್ನು ಒತ್ತಾಯಪಡಿಸುತ್ತಿದ್ದಾರೆ."

" ಸರಿ – ಮುಂದೆ........"

" ವಿಜಯನಗರದ ಮೇಲೆ ಧಾಳಿ ಹೂಡಲು ಸುಲ್ತಾನರಿಗೆ ಸ್ವಲ್ಪವೂ ಮನಸ್ಸಿಲ್ಲ. ಬಹಮನಿರಾಜ್ಯಕ್ಕೂ ವಿಜಯನಗರಕ್ಕೂ ಈಗಿರುವ ಸ್ನೇಹವೇ ಸಾರೋದ್ಧಾರವಾಗಿ ನಡೆದುಬರಬೇಕೆಂದು ಅವರ ಇಚ್ಛೆ."

" ಸುಲ್ತಾನರ ವಿಚಾರಪರತೆ ಶ್ಲಾಘನೀಯವಾಗಿದೆ."

" ಆದರೆ ತಮ್ಮ ಗುಲಾಮ ಯೂಸಫ್ ಅದಿಲ್‌ಖಾ ವಿಜಯನಗರವನ್ನು ಕಬಳಿಸುವುದು ಅವರಿಗೆ ಸ್ವಲ್ಪವೂ ಇಷ್ಟವಿಲ್ಲ – ವಿರೂಪಾಕ್ಷರಾಯರನ್ನು ಸಿಂಹಾಸನಚ್ಯುತರನ್ನಾಗಿ ಮಾಡಿ, ಆ ಸ್ಥಾನದಲ್ಲಿ ಯೋಗ್ಯರಾದವರನ್ನು ಕೂಡಿಸಬೇಕೆಂಬುದೇ ಸುಲ್ತಾನರ ಮನೀಷೆಯಾಗಿದೆ."

" ನಿಮ್ಮ ಸುಲ್ತಾನರ ದೃಷ್ಟಿಯಲ್ಲಿ ಯೋಗ್ಯರಾದವರು ಯಾರು ?"

" ತಾವು !"

" ನಾವೇ !"

" ಹೌದು ಸರ್ಕಾರ್ – ತಾವು ವಿಜಯನಗರವನ್ನು ಕೈವಶಪಡಿಸಿಕೊಳ್ಳುವುದಾದರೆ ಸುಲ್ತಾನರು ಶಕ್ತಿಮೀರಿ ಸಹಾಯ ಮಾಡಲು ಸಿದ್ಧರಾಗಿದ್ದಾರೆ."

" ಇದಕ್ಕೆ ಅವರು ಬಯಸುವ ಪ್ರತ್ಯುಪಕಾರ ?"

" ಹೊನ್ನು ಮತ್ತು ತಮ್ಮ ಶಾಶ್ವತ ಸ್ನೇಹ."

ನಾಯಕರು ಪೀಠದಿಂದೆದ್ದು, ಶಥಪಥ ಸುತ್ತುತ್ತ,

" ನಿಮ್ಮ ಸುಲ್ತಾನರು ಕುಶಾಗ್ರಮತಿಗಳೆನ್ನುವುದನ್ನು ನಾವು ಒಪ್ಪಿಕೊಳ್ಳುತ್ತೀವೆ ಖಾ ಸಾಹೇಬರೇ........"

" ಖಾವಂದಿರ ಸಲಹೆ ಸ್ವೀಕೃತವಾಯಿತೇ ?"

" ಅಷ್ಟು ಅವಸರಪಡಬೇಡಿ – ಕೇಳಿ. ವಿರೂಪಾಕ್ಷರಾಯರಿಗೂ ನಮಗೂ ಅಂತರಂಗ ಚೆನ್ನಾಗಿಲ್ಲವೆಂದರಿತಿರುವ ನಿಮ್ಮ ಸುಲ್ತಾನರು ಈ ಹಂಚಿಕೆ ಹೂಡಿದ್ದಾರೆ. ವಿಜಯನಗರದ ರಾಜಕಾರಣದಲ್ಲಿ ನೀವು ಕೈಹಾಕಲು ಅವಕಾಶಕೊಡುವಷ್ಟು ಮೂರ್ಖರೇ ನಾವು. ನಮಗೆ ವಿಜಯನಗರ ಸಿಂಹಾಸನಬೇಕಾದಲ್ಲಿ ಅದನ್ನು ತೆಗೆದುಕೊಳ್ಳಲು ನಾವು ಸಮರ್ಥರಾಗಿದ್ದೇವೆ. ನಮ್ಮ ರಾಷ್ಟ್ರಕ್ಕೆ ನಾವೇ ಎರಡು ಬಗೆದು ಸಿಂಹಾಸನ ಗಳಿಸು

ವಷ್ಟು ನರಸಿಂಹನಾಯಕರು ಕ್ಷುಲ್ಲರಲ್ಲ ಎಂದು ನಿಮ್ಮ ಸುಲ್ತಾನರಿಗೆ ತಿಳಿಸಿ. ವಿಜಯನಗರದ ಮೇಲೆ ನೀವು ಕೈಯೆತ್ತಿದರೆ ನಮ್ಮಮೇಲೆ ಕೈಯೆತ್ತಿದಂತೆಯೇ-"

" ಸುಲ್ತಾನರಿಗೆ ಯಾವ ದುರುದ್ದೇಶವೂ ಇಲ್ಲ ಸರ್ಕಾರ್. ನೆರೆಯ ರಾಜ್ಯ ಸುರಕ್ಷಿತವಾಗಿರಲಿ ಎಂದೇ ಅವರ ಅಪೇಕ್ಷೆ."

ನರಸಿಂಹನಾಯಕರು ಗಹಗಹಿಸಿ ನಕ್ಕು,

" ವಿಜಯನಗರದ ಮೇಲೆ ನಿಮ್ಮ ಸುಲ್ತಾನರು ತೋರುತ್ತಿರುವ ಅವ್ಯಾಜ ಅಂತಃಕರಣ ನಮ್ಮನ್ನು ಮೂಕರನ್ನಾಗಿಸಿದೆ – ನಿಮ್ಮ ಪರಿಸ್ಥಿತಿ ನಾವು ವಿವರಿಸೋಣವೇ ?"

" ಅಪ್ಪಣೆಯಾಗಲಿ."

" ಬಹಮನಿರಾಜ್ಯ ತುಮರುತುಮರಾಗಿ ಒಡೆಯುವ ಕಾಲ ಸನ್ನಿಹಿತ ವಾಗುತ್ತಲಿದೆ – ಯೂಸಫ್ ಆದಿಲ್ ಖಾನನೇ ಈ ಸ್ಫೋಟನದ ನಾಯಕ. ಹಾವೂ ಸಾಯಬೇಕು – ಕೋಲೂ ಮುರಿಯಬಾರದು ಎನ್ನುವಂತೆ, ವಿಜಯ ನಗರದ ಸಿಂಹಾಸನದ ಮೇಲೆ ತಮ್ಮ ವಿಶ್ವಾಸಿಗನೊಬ್ಬನನ್ನು ಕೂಡಿಸಿ, ತಾವು ನಿರಾಪದವಾಗಿರಬೇಕೆಂದು ನಿಮ್ಮ ಸುಲ್ತಾನರು ಬಯಸುತ್ತಿದ್ದಾರೆ."

ಗುಟ್ಟು ರಟ್ಟಾದುದನ್ನು ಕಂಡ ಫರ್ಹಾತ್ ಖಾ ಹೆದರಿ,

"ಮಾಫ್ ಮಾಡಬೇಕು ಸರ್ಕಾರ್ – ಸುಲ್ತಾನರ ಸಲಹೆಯನ್ನು ತಾವು ಅಂಗೀಕರಿಸಲಿಲ್ಲವೆಂದು ನಾವು ಅರಿಕೆಮಾಡಿಕೊಳ್ಳುತ್ತೇವೆ."

" ನಾಲ್ಕು ದಿನವಿದ್ದು ನಮ್ಮ ಅತಿಥ್ಯ ಸ್ವಿಕರಿಸಿ, ಹೋಗಿ ಖಾನ್ ಸಾಹೇಬ್ – ಅವಸರವೇನೂ ಇಲ್ಲ."

" ಮತ್ತೊಮ್ಮೆ ತಮ್ಮ ಆತಿಥ್ಯ ಸ್ವೀಕರಿಸುತ್ತೇವೆ. ಈಗ ನಾವು ಹೊರಡಲು ಅನುಮತಿಕೊಡಬೇಕು."

" ಅಗತ್ಯವಾಗಿ ಆಗಲಿ – ಈಶ್ವರನಾಯಕರು ನಿಮ್ಮೊಂದಿಗೆ ಬಂದು ಸುರಕ್ಷಿತವಾಗಿ ಗಡಿ ಮುಟ್ಟಿಸುತ್ತಾರೆ."

ಎಂದು ನಾಯಕರು ನುಡಿದ ಶ್ರೀಗುರುಗಳ ದರ್ಶನ ಪಡೆಯಲು ಚಂದ್ರಮಹಲಿಗೆ ಬಂದರು.

ಅವರ ಉದ್ವಿಗ್ನಸ್ಥಿತಿ ಕಂಡ ಶ್ರೀಗುರುಗಳು.

" ಏನಾಯಿತು ನಾಯಕರೇ ?" ಎಂದು ಕೇಳಿದರು.

ರಾಯಭಾರಿಗಳೊಂದಿಗೆ ನಡೆದಿದ್ದ ಮಾತುಕತೆಯನ್ನು ನಾಯಕರು ವಿವರಿಸಲು, ನಕ್ಕ ಶ್ರೀಗುರುಗಳು,

" ವಿಜಯನಗರ ಸಾಮ್ರಾಜ್ಯಾಧೀಶರಾಗಲು ನಿಮಗೆ ಇಚ್ಛೆಯಿಲ್ಲವೇ ?"

" ಯಾರಿಗೆ ಇಚ್ಛೆಯಿರುವುದಿಲ್ಲ ಗುರುದೇವಾ. ಮ್ಲೇಚ್ಛರ ನೆರವು ಪಡೆದು ನಮ್ಮ ವಿಜಯನಗರದ ಮೇಲೆ ನಾನೇ ಧಾಳಿಹೂಡಲೇ ?"

" ವಿರೂಪಾಕ್ಷರಾಯರ ಆಡಳಿತದಿಂದ ವಿಜಯನಗರ ಎಲ್ಲಿ ಹಿಂದೂಗಳ ಕೈಬಿಟ್ಟು ಹೋಗುವದೋ ಎಂದು ನಮಗೆ ಭಯವಾಗಿದೆ."

" ನಾನು ಚಂದ್ರಗಿರಿಯಲ್ಲಿ ಕುಳಿತಿದ್ದರೂ ನನ್ನ ಎರಡು ಕಣ್ಣುಗಳೂ ರಾಜಧಾನಿಯ ಮೇಲೇ ಇವೆ. ವಿಜಯನಗರದ ಗಡಿಯೊಳಗೆ ಮ್ಲೇಚ್ಛರು ಕಾಲಿಟ್ಟರೆ, ನಾನು ಅದರ ರಕ್ಷಣೆಗೆ ಸೈನ್ಯಸಮೇತ ಧಾವಿಸುತ್ತೇನೆ. ನನ್ನ ಸಮಸ್ತ ಪ್ರಜರೂ ವಿಜಯನಗರದ ಸಂರಕ್ಷಣೆಗಾಗಿ ಪ್ರಾಣ ಒಪ್ಪಿಸಲು ಸಿದ್ಧರಾಗಿದ್ದಾರೆ."

" ಸಾಮ್ರಾಜ್ಯದ ಬಗ್ಗೆ ನೀನು ತಳೆದಿರುವ ಧೋರಣೆ ಆದರ್ಶಪ್ರಾಯ ವಾದುದು. ಯಾರೇ ವಿಜಯನಗರದ ಪ್ರಭುಗಳಾಗಿದ್ದರೂ ಅದರ ಸುಭದ್ರತೆಗೆ ಧಕ್ಕೆಯೊದಗಬಾರದು."

ಎಂದು ಶ್ರೀಗುರುಗಳು ಅಪ್ಪಣೆಕೊಡಿಸಿ.

"ನಾಳೆ ಶುಕ್ರವಾರಕ್ಕೆ ನಮ್ಮ ಚಾತುರ್ಮಾಸ್ಯ ಮುಗಿಯುತ್ತದೆ. ಇನ್ನು ನಾವು ಮುಳುಬಾಗಿಲಿಗೆ ಪ್ರಯಾಣ ಬೆಳಸಬಹುದಷ್ಟೆ !"

"ಮುಳುಬಾಗಿಲು ಮಠಕ್ಕೆ ಯೋಗ್ಯ ಉತ್ತರಾಧಿಕಾರಿಯನ್ನು ನೇಮಿಸಿ, ತಾವೇ ಇಲ್ಲೇ ಬಂದಿರಲು ಸಾಧ್ಯವಿಲ್ಲವೇ ?"

" ನಾವು ಬಂದು ನಿನ್ನ ಜತೆಯಲ್ಲಿರುವ ಕಾಲಸನ್ನಿಹಿತವಾಗುತ್ತಿದೆ. ಆವೇಳೆಯೊಳಗಾಗಿ ನಾವು ಮುಳುಬಾಗಿಲಿನಲ್ಲಿ ಅಗತ್ಯವಾಗಿ ಆಗಬೇಕಾಗಿರುವ ಕೆಲಸಕಾರ್ಯಗಳನ್ನು ಮುಗಿಸಬೇಕಾಗಿದೆ. ನಮ್ಮನ್ನು ನೀನೂ, ಶ್ರೀರಂಗ ಮಾಂಬೆ ಸಂತೋಷವಾಗಿ ಬೀಳ್ಕೊಡಬೇಕು "

ಶುಕ್ರವಾರ ಪೂಜೆ ಮುಗಿಸಿಕೊಂಡು ಚಂದ್ರಗಿರಿಯಲ್ಲೆ ಶ್ರೀಗುರುಗಳು ಪ್ರಸಾರ ಸ್ವೀಕರಿಸಿದರು. ದಣ್ಣಾಯಕರು, ನಾಗರಿಕರು, ಎಲ್ಲರೂ ನಮಿಸಲು ಶ್ರೀಗುರುದೇವರು ಕಟಾಕ್ಷಪೂರ್ಣರಾಗಿ ಅವರನ್ನು ಆಶೀರ್ವದಿಸಿದರು.

ಬೋಯಿಗಳು ಬಂದು ಮೇನೆಯ ಬಳಿ ನಿಲ್ಲಲು, ನಾಯಕರು ಅವರನ್ನು ತಡೆದು, ಶ್ರೀಗುರುದೇವರ ಕಡೆ ತಿರುಗಿ,

" ತಮ್ಮನ್ನು ಇಲ್ಲಿಯೇ ಇಟ್ಟುಕೊಂಡು ಪೂಜಿಸುವಷ್ಟು ನಾನು ಭಾಗ್ಯಶಾಲಿಯಲ್ಲ. ತಮ್ಮ ಸಂಕೇತವಾಗಿ ಪಾದುಕೆಗಳನ್ನು ಅನುಗ್ರಹಿಸಬೇಕು. ಅವುಗಳನ್ನು ಪೂಜಿಸಿ ಮನಃತೃಪ್ತಿಪಡುತ್ತೇನೆ "

ಎನ್ನಲು ಶ್ರೀಗುರುಗಳು ಪ್ರಸನ್ನವದನರಾಗಿ ಪಾದುಕೆಗಳನು ಅನುಗ್ರಹಿಸಿ,

" ನನ್ನ ಮೋಹನ ಮುರಾರಿಯೇ ಕಲಿಯುಗದ ಭರತ " ಎಂದರು.

ನಾಯಕರು ಶ್ರೀರಂಗಮಾಂಬೆ ಪ್ರಜಾವರ್ಗದ ನಮನ ಸ್ವೀಕರಿಸಿ ಶ್ರೀಗುರುಗಳು ಎಲ್ಲರನ್ನೂ ಹೃತ್ಪೂರ್ವಕ ಹರಸಿ ಮುಳುಬಾಗಿಲು ಪ್ರಾಂತ್ಯಾಭಿಮುಖರಾದರು.

ಕಲ್ಬುರ್ಗಿಗೆ ಹಿಂದುರುಗಿದ ಫರ್ಹಾತ್ ಖಾನ್ ಮತ್ತು ಷಹಬಾಜ್ ಖಾನ್, ತಮ್ಮ ಸಂಧಾನ ಮುರಿದುಬಿದ್ದ ವಿಷಯ ಸುಲ್ತಾನರಿಗೆ ಅರಿಕೆ ಮಾಡಲು, ಅವರ ಇಚ್ಛೆಯಂತೆ ಮಹಮುದ್ ಗವಾನ್ ದಂಡಯಾತ್ರೆ ಹೊರಟುಬಿಟ್ಟ.

ಅರಕ್ಷಿತವಾಗಿದ್ದ ಗೋವೆ ಲೀಲಾಜಾಲವಾಗಿ ಮಹಮದ್ ಗವಾನನ ಕೈಸೇರಿತು.

ಗೋವೆ ಪತನದ ಸುದ್ದಿ ವಿರೂಪಾಕ್ಷರಾಯನಿಗೆ ಮುಟ್ಟಲು, ಅವನು ಬೆಳಗಾಂವಿಯ ದುರ್ಗಾಧಿಪತಿ ವಿಕ್ರಮಸಿಂಹನಿಗೆ ನಿರೂಪಕಳಿಸಿ, ಗೋವೆಯ ಮೇಲೆ ಸೈನ್ಯ ನಡೆಸಲು ಆಜ್ಞೆ ವಿಧಿಸಿದ.

ಬೆಳಗಾಂವಿಯ ರಕ್ಷಣೆಗೆ ಸಾಕಾಗುವಷ್ಟು ಸೈನ್ಯ ಮಾತ್ರ ದುರ್ಗಾಧಿಪತಿಯ ಬಳಿಯಲ್ಲಿತ್ತು.

ತಾನು ಗೋವೆಯ ಕಡೆ ನುಗ್ಗಿದರೆ, ಬೆಳಗಾಂವಿ ಅರಕ್ಷಿತವಾಗುತ್ತದೆ. ನುಗ್ಗದಿದ್ದರೆ ಪ್ರಭುವಾಜ್ಞೆ ನಿರಾಕರಿಸಿದಂತಾಗುತ್ತದೆ – ಈ ಸಂದಿಗ್ಧಕ್ಕೆ ಸಿಲುಕಿದ ವಿಕ್ರಮಸಿಂಹ, ತನ್ನ ಸೈನ್ಯದ ಎರಡು ತುಕಡಿಗಳನ್ನು ಬೆಳಗಾಂವಿಯ ರಕ್ಷಣೆಗೆ ಬಿಟ್ಟು ಉಳಿದ ಸೈನ್ಯದೊಂದಿಗೆ ಗೋವೆಯುತ್ತ ಸಾಗಿದ.

ವಿಕ್ರಮಸಿಂಹ ಸೈನ್ಯಸಮೇತನಾಗಿ ಗೋವೆಯತ್ತ ಬರುತ್ತಿರುವುದನ್ನು ಬೇಹುಗಾರರಿಂದರಿತ ಗವಾನ್ ತನ್ನ ಸೈನ್ಯದ ಅರ್ಧಭಾಗವನ್ನು ಫರ್ಹಾತ್ ಖಾನನ ನೇತೃತ್ವದಲ್ಲಿ ಬೆಳಗಾಂವಿಗೆ ಕಳಿಸಿ, ಉಳಿದ ಸೈನ್ಯದೊಂದಿಗೆ ವಿಕ್ರಮ ಸಿಂಹನೊಂದಿಗೆ ಕಾದಲು ಸಿದ್ಧನಾದ.

ಗೋವೆ ಸಮೀಪಿಸಿದ ವಿಕ್ರಮಸಿಂಹನ ಸೈನ್ಯ ನೋಡಿ ಗವಾನ್ 'ಇದು ಯುದ್ಧವಲ್ಲ – ಕಗ್ಗೊಲೆಯಾಗುತ್ತದೆ' ಎಂದು ಭಾವಿಸಿ, ಷಹಬಾಜ್ ಖಾನನನ್ನು ವಿಕ್ರಮಸಿಂಹನ ಪಾಳೆಯಕ್ಕೆ ಕಳಿಸಿಕೊಟ್ಟ.

ವಿಕ್ರಮಸಿಂಹನನ್ನು ಕಂಡ ಷಹಬಾಜ್ ಖಾನ್,

"ಇಷ್ಟು ಸಣ್ಣ ಸೈನ್ಯ ತೆಗೆದುಕೊಂಡು, ನಮ್ಮ ವಿರುದ್ಧ ಹೋರಾಡಲು

ಬಂದಿರುವ ನಿಮ್ಮ ಪರಾಕ್ರಮ ಸ್ತುತ್ಯವಾದುದು. ಆದರೆ ನಿಮಗೆ ಜಯ ದೊರೆಯುವುದು ದುಸ್ಸಾಧ್ಯ. ದಂಡಾಧಿಕಾರಿಗಳಾದ ವಜೀರ್ ಮಹಮದ್ ಗವಾನರು, ಮಹಾಪರಾಕ್ರಮಿಗಳಾಗಿರುವಷ್ಟೇ ಕರುಣಾಳುಗಳೂ ಆಗಿದ್ದಾರೆ. ಅಸಮಬಲದ ಸೈನ್ಯದೊಂದಿಗೆ ಕಾದುವುದು ವಿರೋಚಿತವಲ್ಲವೆಂದೇ ಅವರ ಭಾವನೆ. ನೀವು ಶರಣಾಗತರಾದರೆ, ಗವಾನರು ನಿಮಗೆ ಪ್ರಾಣಭಿಕ್ಷೆ ನೀಡಲು ಸಿದ್ಧರಾಗಿದ್ದಾರೆ."

"ಸರ್ದಾರಜೀ – ನಾನು ಸೈನಿಕ. ಯುದ್ಧಮಾಡು ಎಂದು ನನ್ನ ಪ್ರಭುಗಳು ಆಜ್ಞೆಮಾಡಿದ್ದಾರೆ. ಯುದ್ಧ ಮಾಡುವುದಷ್ಟೇ ನನ್ನ ಕರ್ತವ್ಯ – ಅದರ ಫಲಾಫಲಗಳು ನನಗೆ ಸೇರಿದ್ದಲ್ಲ. ನಿಮ್ಮ ವಜೀರರು ದೊಡ್ಡ ವ್ಯಕ್ತಿಗಳೆಂದು ಕೇಳಿದ್ದೇನೆ. ಇಸ್ಲಾಮಿನ ನಿಜಭಕ್ತರಂತೆ ಅವರು ನನಗೆ ಕಳಿಸಿರುವ ಸಂದೇಶಕ್ಕಾಗಿ ನಾನು ಋಣಿಯಾಗಿದ್ದೇನೆ. ಯುದ್ಧರಂಗದಿಂದ ಹಿಮ್ಮೆಟ್ಟುವ ಕ್ಷತ್ರಿಯನನ್ನು ಲೋಕ ಗೌರವಿಸುವುದೇ ? ಪ್ರಾಣದ ಮೇಲಣ ಆಸೆಗಾಗಿ, ನಾನು ಶರಣಾಗತನಾಗಿ, ತರುವಾಯ ಲೋಕನಿಂದೆಗೆ ಗುರಿಯಾಗಿ ನಾಯಿ ಬಾಳು ಬಾಳಲೇ ? ವಜೀರ ಸಾಹೇಬರಿಗೆ ನನ್ನ ನಮಸ್ಕಾರ ತಿಳಿಸಿ, ಯುದ್ಧ ಆರಂಭಿಸಬೇಕೆಂದು ಪ್ರಾರ್ಥಿಸಿ."

ಅವನತಮುಖನಾಗಿ ಕುಳಿತ ಷಹಬಾಜ್ ಖಾನನ ಕಣ್ಣುಗಳಿಂದ ಹನಿಗಳು ಮಿಡಿದವು.

"ಮುಸಲ್ಮಾನರೆಲ್ಲಾ ಹಿಂಸಾಜೀವಿಗಳೆಂದು ನೀವು ತಿಳಿದಿದ್ದೀರೇನೋ-ರಾಜ್ಯದಾಹ ನಮ್ಮನ್ನು ಹಿಂಸಾಜೀವಿಗಳನ್ನಾಗಿ ಮಾಡಿದೆ. ಆದರೆ ನಮ್ಮ ವಜೀರ ಸಾಹೇಬರು ಈ ನಿಯಮಕ್ಕೆ ಪ್ರತಿಷೇದವಾಗಿದ್ದಾರೆ. ಕರ್ತವ್ಯಕ್ಕೆ ಬದ್ಧರಾಗಿ ಅವರು ಯುದ್ಧಮಾಡುತ್ತಾರಲ್ಲದೆ, ದುರಾಶಾಪೂರ್ಣತೆಗಲ್ಲ. ಶಾಂತಿ – ಶಾಂತಿ – ಶಾಂತಿ ಎಂದು ಅವರ ಮನಸ್ಸು ಕಾತರಿಸುತ್ತಿದೆ. ದಯೆಯಿಟ್ಟು ಯುದ್ಧದ ಯೋಚನೆ ದೂರಮಾಡಿ."

"ಯುದ್ಧ ನಾನು ಆರಂಭಿಸಿದ್ದರೆ ಖಂಡಿತವಾಗಿ ನಿಮ್ಮ ಕೋರಿಕೆಯನ್ನು ಈಡೇರಿಸುತ್ತಿದ್ದೆ. ಯುದ್ಧ ಆರಂಭವಾದದ್ದು ನಿಮ್ಮಿಂದ – ವಿಜಯನಗರ ಸಾಮ್ರಾಜ್ಯಕ್ಕೆ ಸೇರಿದ ಗೋವೆಯನ್ನು ನೀವು ವಶಪಡಿಸಿಕೊಂಡಿರುವಾಗ ಅದನ್ನು ಪುನರಾರ್ಜಿಸುವುದು ನಮ್ಮ ಕರ್ತವ್ಯವಲ್ಲವೇ ? – ಹುಟ್ಟು ಸಾವು

ಎರಡೂ ಅನಿವಾರ್ಯ. ಹುಟ್ಟಿದವನು ಸಾಯಲೇ ಬೇಕು, ಸತ್ತವನು ಮತ್ತೆ ಹುಟ್ಟಲೇ ಬೇಕು. ಈ ನಂಬಿಕೆಯಲ್ಲಿ ಬೆಳೆದು ಬಂದಿರುವ ನಮಗೆ ಮರಣ ಭೀತಿಯಿಲ್ಲ. – ಆದರೆ ಈ ದುರಂತ ಅಭಿಯೋಗದಲ್ಲಿ ನಿಮ್ಮ ಪರಿಚಯ ವಾದದ್ದು ಹೆಚ್ಚಿನ ವಿಷಯ." ಎಂದರು.

ಷಹಬಾಜ್ ಖಾ಼ ಎದ್ದು ನಿಂತು ಗದ್ಗದ ಕಂಠದಿಂದ

" ಖುದಾ ಹಾಫೀಜ್ " ಎಂದ.

ಷಹಬಾಜ್ ಖಾನನ್ನಪ್ಪಿದ ವಿಕ್ರಮಸಿಂಹ,

ದೇವರು ನಿಮ್ಮನ್ನು ಕಾಪಾಡಲಿ "

ಎಂದು ಶುಭಾಶಯ ವ್ಯಕ್ತಪಡಿಸಿದ.

ಮಹಮದ್ ಗವಾನರು ನಿರೀಕ್ಷಿಸಿದ್ದಂತೆ ಯುದ್ಧ ಅಸಮಬಲ ಪ್ರದರ್ಶನವಾಯಿತು.

ವಿಕ್ರಮಸಿಂಹನ ಪಡೆ, ಗವಾನರ ಪಡೆಯೊಂದಿಗೆ ಕಾದುತ್ತಿದ್ದಾಗ, ಬಹಮನಿಯ ಬಿಲ್ಲಾಳೊಬ್ಬ, ಗುರಿಯಿಟ್ಟು ವಿಕ್ರಮಸಿಂಹನ ಎದೆಗೆ ಬಾಣ ಪ್ರಯೋಗಿಸಿದ.

ವಿಕ್ರಮಸಿಂಹ ಕೆಳಗೆ ಬಿದ್ದೊಡನೆಯೇ ಗವಾನರು ಯುದ್ಧ ನಿಲ್ಲಿಸಲು ಆಜ್ಞೆಯಿತ್ತು, ವೀರ ವಿಕ್ರಮನ ಕಳೇಬರಕ್ಕೆ ಅಂತಿಮ ಗೌರವ ಸಲ್ಲಿಸಿ, ಅವನ ಸೈನಿಕರಿಗೆ ಒಪ್ಪಿಸಿಬಿಟ್ಟರು.

ಗೋವೆ, ಬೆಳಗಾಂವಿಯ ವಿದ್ಯಮಾನಗಳು ನರಸಿಂಹನಾಯಕರಿಗೆ ತಿಳಿದು ಬರಲು, ಅವರು ವ್ಯಗ್ರಚಿತ್ತರಾಗಿ ಕೂಡಲೆ ಮಂತ್ರಾಲೋಚನ ಸಭೆ ಸೇರಿಸಿದರು.

ಬಿಸಿರಕ್ತದ ನರಸನಾಯಕ ವಿಜಯನಗರಕ್ಕಾಗಿದ್ದ ಪರಿಭವ ಕೇಳಿ ಖತಿಗೊಂಡಿದ್ದ.

" ನಾವು ನಿರೀಕ್ಷಿಸಿದಂತೆಯೇ ಆಯಿತು ನಾಯಕರೇ. ವಿಜಯನಗರ ಸಾಮ್ರಾಜ್ಯವನ್ನು ಹೋಳುಹೋಳಾಗಿ ಕಳೆದುಕೊಳ್ಳಲು ವಿರೂಪಾಕ್ಷರಾಯರು ಕಂಕಣ ತೊಟ್ಟಿರುವಂತಿದೆ."

ಎಂದು ಅರವೀಟಿ ಬುಕ್ಕನಾಯಕರು ಅಭಿಪ್ರಾಯಪಟ್ಟರು.

" ವಿರೂಪಾಕ್ಷರಾಯರಿಗೆ ವಿವೇಕ ಹೇಳುವವರೇ ರಾಜಧಾನಿಯಲ್ಲಿ ಇಲ್ಲ ವೆಂದು ಕಾಣುತ್ತದೆ."

ಎಂದು ನಾಗಮನಾಯಕರು ಹೇಳಲು ಕಣ್ಣುಗಳಿಂದ ಕಿಡಿಕಾರುತ್ತ ಚಿಟ್ಟಿ ಗಂಗಣ್ಣನಾಯಕರು,

" ಮೂರ್ಖರಿಗೆ ಯಾರು ವಿವೇಕ ಹೇಳಲು ಸಾಧ್ಯ " ಎಂದರು.

" ತಾವು ಸುಖವಾಗಿ ರಾಜಧಾನಿಯಲ್ಲಿ ಕುಳಿತು, ಬೆಳಗಾಂವಿಯ ದುರ್ಗಾಧಿಪತಿಯನ್ನು ಗೋವೆಯ ವಿಮೋಚನೆಗೆ ಕಳಿಸುವುದರ ಅರ್ಥವೇನು? ಸ್ವಯಂ ಮಹಮುದ್ ಗವಾನರೇ ಸೈನ್ಯಾಧಿಪತ್ಯ ವಹಿಸಿಕೊಂಡಿದ್ದುದನ್ನು ತಿಳಿದೂ ವಿಕ್ರಮಸಿಂಹನನ್ನು ಕಳಿಸಿದ ಮಹಾಪ್ರಭುಗಳನ್ನು ಕೊಲೆಪಾತಕರೆನ್ನ ಬೇಕಾಗುತ್ತದೆ."

ಎಂದು ಈಶ್ವರನಾಯಕರು ಟೀಕಿಸಿದರು.

ಅಣ್ಣಮರಸಯ್ಯ, ತಿಪ್ಪರಸಯ್ಯ, ಚನ್ನಪ್ಪ ನಾಯಕರೂ ಮಹಾಪ್ರಭು ಗಳ ಆಲಸ್ಯವೃತ್ತಿಯನ್ನು ತೀಕ್ಷ್ಣವಾಗಿ ಖಂಡಿಸಿದರು.

ಸರ್ವಸಭಿಕರ ಅಭಿಪ್ರಾಯ ತಿಳಿದ ನರಸಿಂಹನಾಯಕರು,

" ವಿರೂಪಾಕ್ಷರಾಯರನ್ನು ಆಕ್ಷೇಪಿಸುತ್ತ ಕುಳಿತರೆ ಏನು ಪ್ರಯೋಜನ. ಗೋವೆ, ಬೆಳಗಾಂವಿಗಳ ಆಕ್ರಮಣದಿಂದ ಸಾಮ್ರಾಜ್ಯ ಗೌರವ ಮಣ್ಣುಗೂಡಿ ಹೋಗಿದೆ. ಈ ವಿಜಯಗಳಿಂದ ಮೈಯುಬ್ಬಿದ ಮಹಮದ್‌ಷಹರು, ಅತಿ ಶೀಘ್ರವಾಗಿಯೇ ವಿಜಯನಗರ ಮುತ್ತುವುದರಲ್ಲಿ ಯಾವ ಸಂದೇಹವೂ ಇಲ್ಲ. ಈಗ ನಮ್ಮ ಕರ್ತವ್ಯವೇನೆಂಬುದನ್ನು ನಿಶ್ಚಯಿಸಬೇಕು."

" ಗೋವೆ, ಬೆಳಗಾಂವಿಗಳನ್ನು ನಾವು ಕೈವಶಪಡಿಸಿಕೊಳ್ಳಬೇಕು."

ಎಂದು ಈಶ್ವರನಾಯಕರು, ಹೇಳಲು ನರಸನಾಯಕ,

" ಏಕೆ ? ವಿರೂಪಾಕ್ಷರಾಯರಿಗೊಪ್ಪಿಸುವುದಕ್ಕೇನು ?"

" ಅಲ್ಲ – ಸಾಮ್ರಾಜ್ಯಕ್ಕೊಪ್ಪಿಸುವುದಕ್ಕೆ "

ಎಂದು ಈಶ್ವರನಾಯಕರು ಒತ್ತಿ ಹೇಳಿದರು.

" ವಿರೂಪಾಕ್ಷರಾಯರು ಒಂದೊಂದಾಗಿ ರಾಜ್ಯಗಳನ್ನು ಕಳೆಯುತ್ತ ಬರಲಿ – ನಾವು ಅವುಗಳನ್ನು ಪುನಃ ಸಂಪಾದಿಸಿ ಅವರಿಗೆ ಒಪ್ಪಿಸುತ್ತ ಬರೋಣ – ಇದು ಒಳ್ಳೆಯ ಕಾಯಕ !"

" ಹಾಗಾದರೆ ನಾವು ತಾಟಸ್ಥ್ಯಧೋರಣೆ ತಳೆದು, ವಿಜಯನಗರ ಕ್ಕಾಗಿರುವ ಪರಿಭವಕ್ಕೆ ಆನಂದಪಡುತ್ತ ಕೂಡೋಣವೇ ನರಸನಾಯಕರೇ ?"

ಎಂದು ಬುಕ್ಕನಾಯಕರು ಕೋಪಿಸಿ ಹಾಕಿದರು.

" ವ್ಯಾಧಿ ಬಲಿತಿದೆ ಬುಕ್ಕನಾಯಕರೇ – ಔಷದೋಪಚಾರಗಳಿಂದ ಇದನ್ನು ಗುಣಪಡಿಸಲು ಶಕ್ಯವಿಲ್ಲ – ಶಸ್ತ್ರ ಚಿಕಿತ್ಸೆಯೇ ಆಗಬೇಕು."

" ಹಾಗೆಂದರೇನು ?"

" ಸಾಳುವರಸರು ಎದುರಿಗಿದ್ದಾರೆ – ಚಿಂತೆಯಿಲ್ಲ – ಅವರ ಎದುರಿಗೇ ನನ್ನ ಅಭಿಪ್ರಾಯ ತಿಳಿಸಿಬಿಡುತ್ತೇನೆ. ಹಿರಿಯರಾದ ನೀವುಗಳು ವಿಚಾರಮಾಡಿ ಒಂದು ನಿರ್ಧಾರಕ್ಕೆ ಬರಬಹುದು."

" ನಿಶ್ಶಂಕೆಯಿಂದ ಹೇಳಿ."

ಎಂದು ಚಿಟ್ಟಿ ಗಂಗಣ್ಣನಾಯಕರು ಸೂಚಿಸಲು ನರಸನಾಯಕ,

" ವಿಜಯನಗರ ಮಹಾಸಾಮ್ರಾಜ್ಯ ಸೂತ್ರಗಳನ್ನು ಕೈಯಲ್ಲಿ ಧರಿಸುವ ಶಕ್ತಿ, ಯೋಗ್ಯತೆ, ಪ್ರತಿಭೆ ವಿರೂಪಾಕ್ಷರಾಯರಿಗಿಲ್ಲ ಎನ್ನುವ ವಿಷಯ ಸ್ವತಃ ಸಿದ್ಧವಾಗಿದೆ. ಯಾರಿಗೋ ಸೇರಬೇಕಾಗಿದ್ದ ಸಾಮ್ರಾಜ್ಯ ಸಿಂಹಾಸನವನ್ನು

ವಿರೂಪಾಕ್ಷರಾಯರು ಆಕ್ರಮಿಸಿಕೊಂಡಿದ್ದಾರೆ. ದುರ್ಬಲರಾದ ಈ ಪ್ರಭುಗಳು ಸಾಮ್ರಾಜ್ಯವನ್ನು ನಾಶಪಡಿಸುವುದಕ್ಕೆ ಅವಕಾಶಕೊಡದೆ, ನಾವು ಯೋಗ್ಯರನ್ನು ಆ ಸ್ಥಾನದಲ್ಲಿ ಕೂಡಿಸುವುದೊಂದೇ ಪರಿಹಾರ."

"ನಿಮ್ಮ ದೃಷ್ಟಿಯಲ್ಲಿ ಯೋಗ್ಯರು ಯಾರು ನರಸನಾಯಕರೇ"

ಎಂದು ಅರವೀಟಿ ಬುಕ್ಕನಾಯಕರು ಕೇಳಲು, ಸ್ವಲ್ಪವೂ ಅನುಮಾನಿಸದೆ ನರಸನಾಯಕ,

"ಪೃಥ್ವೀವಲ್ಲಭ, ಮೋಹನ ಮುರಾರಿ, ಶ್ರೀಶ್ರೀ ಸಾಳುವ ನರಸಿಂಹನಾಯಕರು" ಎಂದ.

ಸಭೆಯಲ್ಲಿ ವಿದ್ಯುತ್ ಪ್ರವೇಶವಾದಂತಾಯಿತು.

ನರಸಿಂಹನಾಯಕರೂ ತರುಣ ದಣ್ಣಾಯಕನ ಸಲಹೆ ಕೇಳಿ ಬೆಚ್ಚಿದರು.

ಅರವೀಟಿ ಬುಕ್ಕನಾಯಕರು ಉತ್ಸಾಹದಿಂದ,

"ನರಸನಾಯಕರ ಸಲಹೆ ಗ್ರಾಹ್ಯವಾಗಿದೆ. ತುಂಬು ಮನಸ್ಸಿನಿಂದ ನಾನು ಅವರ ಸೂಚನೆಯನ್ನು ಅನುಮೋದಿಸುತ್ತೇನೆ" ಎಂದರು.

ಸಭೆಯಲ್ಲಿದ್ದ ನಾಯಕರೆಲ್ಲಾ ಉತ್ಸಾಹದಿಂದ 'ಅಸ್ತು' ಎಂದರು.

ನರಸಿಂಹನಾಯಕರು ಬೇಸರದ ದನಿಯಲ್ಲಿ,

"ಸದ್ಯದ ಕರ್ತವ್ಯ ಮರೆತು, ನಾವು ಅನವಶ್ಯಕ ವಿಷಯಗಳನ್ನು ಚರ್ಚಿಸಿ ಕಾಲಹರಣ ಮಾಡುತ್ತಿದ್ದೇವೆ. ವಿಜಯನಗರ ಸಿಂಹಾಸನವನ್ನು ಯಾರು ಅಲಂಕರಿಸಬೇಕೆಂದು ವಿಚಾರ ಮಾಡುವುದಕ್ಕೆ ನಾವು ಇಂದು ಇಲ್ಲಿ ಸೇರಿಲ್ಲ. ವಿಜಯನಗರಕ್ಕೆ ಬಂದಿರುವ ಕುತ್ತನ್ನು ಪರಿಹರಿಸುವ ಬಗೆ ಹೇಗೆಂಬುದನ್ನು ನಿರ್ಧರಿಸಬೇಕು. ಆ ದೃಷ್ಟಿಯಲ್ಲಿ ವಿಚಾರಮಾಡಿ, ನಮಗೆ ಸೂಕ್ತ ಸಲಹೆ ನೀಡಿ." ಎಂದರು.

"ವಿರೂಪಾಕ್ಷರಾಯರು ಒಪ್ಪಲಿ, ಒಪ್ಪದಿರಲಿ ನಾವು ಗೋವೆಯನ್ನು ಮುತ್ತಿ, ಅದನ್ನೂ ಬೆಳಗಾಂವಿಯನ್ನೂ ಕೈವಶಪಡಿಸಿಕೊಳ್ಳಬೇಕು."

ಎಂದು ಈಶ್ವರನಾಯಕರು ನುಡಿಯಲು,

"ನಾವು ಗೋವೆಯತ್ತ ಸಾಗಿದರೆ, ಸುಲ್ತಾನ್ ಮಹಮುದ್‌ಷಹರು ಸಸೈನ್ಯರಾಗಿ ಗೋವೆಗೆ ಬಂದು, ಗವಾನರಿಗೆ ನೆರವಾಗುತ್ತಾರೆ. ಅವರ ಬೃಹತ್ ಸೈನ್ಯವನ್ನೆದುರಿಸಲು ನಮ್ಮ ಸೈನ್ಯಬಲ ಸಾಲದು – ವಿಜಯನಗರದ

ಸೈನ್ಯವೂ ನಮ್ಮೊಂದಿಗೆ ಸೇರಿಕೊಂಡರೆ ಗೋವೆಯನ್ನು ಲೀಲಾಜಾಲವಾಗಿ ತೆಗೆದುಕೊಳ್ಳಬಹುದು."

"ಸೈನ್ಯಸಹಾಯ ಒದಗಿಸಿ ಎಂದು ನಾವು ವಿರೂಪಾಕ್ಷರಾಯರನ್ನು ಕೇಳಬೇಕಾಗುತ್ತದೆ."

ಎಂದು ಚನ್ನಪ್ಪನಾಯಕರು ನುಡಿಯಲು,

"ಅವರು ಸಹಾಯ ನೀಡುತ್ತಾರೆಂದು ನಂಬುವುದು ಹೇಗೆ ? ನಮ್ಮ ದೊರೆಗಳ ಬಗ್ಗೆ ಅಸೂಯಾಗ್ರಸ್ತರಾಗಿರುವ ವಿರೂಪಾಕ್ಷರಾಯರು, ಉದ್ದೇಶ ಪೂರ್ವಕವಾಗಿ ಸಹಾಯ ನಿರಾಕರಿಸದರೆ....!"

"ಸಹಾಯವನ್ನಂತೂ ಕೇಳೋಣ. ಅವರು ಒದಗಿಸಿದರೂ ಸರಿ – ಒದಗಿಸದಿದ್ದರೂ ಸರಿ. ಈ ವಾರ್ಯಾಂತದಲ್ಲಿ ಶುಭ ದಿವಸ ನೋಡಿ ನಾವು ಶ್ರೀ ಭುವನೇಶ್ವರಿಯ ನಾಮಸ್ಮರಣ ಮಾಡುತ್ತಾ ಗೋವೆಗೆ ಪ್ರಯಾಣ ಬೆಳಸೋಣ. ಗೋವಾ ರಣಕ್ಷೇತ್ರವೇ ವಿಜಯನಗರ ಸಾಮ್ರಾಜ್ಯದ ಹಾಗೂ ನಮ್ಮ ಭವಿಷ್ಯವನ್ನು ನಿರ್ಧರಿಸಲಿ"

ಎಂದು ನರಸಿಂಹನಾಯಕರು ದೃಢಮನಸ್ಕರಾಗಿ ನುಡಿಯಲು, ದಣ್ಣಾಯಕರು ವೀರಾವೇಶದಿಂದ,

"ಸಾಳುವ ನರಸಿಂಹ ಪ್ರಭುವಿಗೆ ಜಯವಾಗಲಿ"

ಎಂದು ಘೋಷಿಸಿದರು.

ಗುರುವಾರ ಪ್ರಾತಃಕಾಲ ಹತ್ತು ಗಂಟೆಗೆ ನರಸಿಂಹನಾಯಕರು ಚಂದ್ರ ಗಿರಿಯಿಂದ ಸೈನ್ಯಸಮೇತರಾಗಿ ಗೋವೆಗೆ ಹೊರಡುವುದೆಂದು ನಿಶ್ಚಯ ವಾಯಿತು.

ನಿತ್ಯನಿಯಮದಂತೆ ಉಷಃಕಾಲಕ್ಕೆ ಎದ್ದು ನಾಯಕರು, ಶುಭ್ರಸ್ನಾತ ರಾಗಿ, ದೇವರ ಪೂಜೆಮಾಡಿ, ಶ್ರೀಗುರುಗಳ ಪಾದುಕೆಗಳನ್ನು ಪೂಜಿಸಿ, ಕಣ್ಣಿಗೊತ್ತಿಕೊಂಡು, ಮ್ಲಾನವದನಳಾಗಿದ್ದ ಪತ್ನಿಯ ಕಡೆ ತಿರುಗಿ,

" ವೀರಪತ್ನಿಯಾದ ನೀನು ಸಂತೋಷದಿಂದ ನನ್ನನ್ನು ಕಳಿಸಿಕೊಡ ಬೇಕು " ಎಂದರು.

" ಬಹಮನಿಯವರ ಮೇಲೆ ಸೆಣಸಲು, ನೀವು ತೆಗೆದುಕೊಂಡು ಹೋಗು ತ್ತಿರುವ ಸೈನ್ಯ ನೋಡಿ ನನಗೆ ಭಯವಾಗುತ್ತದೆ."

" ಬಹಮನಿಯವರಲ್ಲಿ ಅಸಂಖ್ಯಾತ ಸೈನ್ಯ ಬಲವಿದೆ. ನಿಜ - ರಂಗಾ, ಆದರೆ ನಮಗೆ ಗುರ್ವಾಶೀರ್ವಾದವೆಂಬ ಮಹಾಬಲವಿದೆ. ನಮ್ಮ ಜಯಾಪ ಜಯದ ಹೊಣೆಗಾರಿಕೆ ಗುರುನಾಥನದು - ನಾವೇಕೆ ವೃಥಾ ಚಿಂತಿಸಬೇಕು "

ಎಂದು ತಮ್ಮ ಏಳು ವರ್ಷದ ಮಗ ಇಮ್ಮಡಿ ನರಸಿಂಹನನ್ನು ಮುದ್ದಾಡಿ,

" ನಿನ್ನ ತಾಯಿಯನ್ನೂ, ಚಂದ್ರಗಿರಿಯ ಸಮಸ್ತ ಪ್ರಜರನ್ನೂ ನೀನೇ ನೋಡಿಕೊಳ್ಳಬೇಕು ನರಸಿಂಹಾ."

" ಯಾವಾಗ ಬರುವಿರಿ ಅಪ್ಪಾಜಿ."

" ಬೇಗ ಬರುತ್ತೇನೆ."

ಏತಕ್ಕೋ ಅನುಮಾನಿಸುತ್ತ ನಿಂತ ನರಸಿಂಹ,

" ಹೊರಗೆ ಹೊರಟಿರುವವರನ್ನು ' ಎಲ್ಲಿಗೆ ಹೋಗುತ್ತೀರಿ ' ಎಂದು ಕೇಳಬಾರದಂತೆ !"

ನರಸಿಂಹನಾಯಕ ನಕ್ಕು,

"ನಾನೇ ಹೇಳುತ್ತೇನೆ ಕುಮಾರ. ನಮ್ಮ ಗೋವಾನಾಡನ್ನು ಮುಸಲ್ಮಾನರು ಆಕ್ರಮಿಸಿದ್ದಾರೆ. ಅವರನ್ನು ಅಲ್ಲಿಂದ ಓಡಿಸಿ, ಗೋವಾ ವಶಪಡಿಸಿಕೊಳ್ಳಲು ಹೋಗುತ್ತಿದ್ದೇನೆ."

"ನಾನೂ ಬರುತ್ತಿದ್ದೆ. ನೀವು ದೊಡ್ಡವರನ್ನು ಹೊಡೆದೋಡಿಸಿದರೆ ನಾನು ಚಿಕ್ಕವರನ್ನು ಹೊಡೆದೋಡಿಸುತ್ತಿದ್ದೆ."

"ದೊಡ್ಡವರನ್ನೇ ಹೊಡೆದೋಡಿಸುವಂತೆ, ಸ್ವಲ್ಪ ತಡೆದುಕೋ ಕುಮಾರ – ಈ ಬಹಮನಿಯವರ ಹಾವಳಿ ನನ್ನ ಕಾಲಕ್ಕೇ ಮುಗಿಯುವಂತೆ ಕಾಣಲಿಲ್ಲ."

ಎಂದು ಪತ್ನಿಯ ಕಡೆ ತಿರುಗಿ,

"ಹೊತ್ತಾಯಿತು – ರಂಗಾ" ಎಂದರು.

ರಂಗಾಂಬಿಕೆ ವೀರಪತಿಗೆ ಅಂಗರೇಖು ತೊಡಿಸಿ, ಕೈಗೆ ಕತ್ತಿ ಗುರಾಣಿಯನ್ನಿತ್ತು, ಕಣ್ತುಂಬ ದಿಟ್ಟಿಸಿ ನೋಡಿ, ಅವರ ಪಾದಗಳಿಗೆ ಮಣಿದಳು.

ಪತ್ನಿಯ ತಲೆ ನೇವರಿಸಿದ ನಾಯಕರು, ತಮ್ಮ ಸೈನ್ಯವಿದ್ದ ಸ್ಥಳಕ್ಕೆ ಬಂದರು.

ದಣ್ಣಾಯಕರು ನಮಸ್ಕರಿಸಲು, ನಾಯಕರು ಎಲ್ಲರಿಗೂ ಪ್ರತಿ ನಮಸ್ಕಾರ ಸಲ್ಲಿಸಿ, ಸೈನ್ಯವನ್ನೊಮ್ಮೆ ಅವಲೋಕಿಸಿ, ಕುದುರೆಯೇರಿ ಕುಳಿತು,

"ವೀರಯೋಧರೇ,

ಯಾವ ಮಹತ್ಕಾರ್ಯ ಸಾಧಿಸಲು ನಾವು ಹೊರಟಿದ್ದೇವೆಂಬುದು ನಿಮಗೆ ತಿಳಿದೇ ಇದೆ. ಗೋವೆಯನ್ನು ಆಕ್ರಮಿಸಿರುವ ಸುಲ್ತಾನ್ ಮಹಮದರ ಅಸಂಖ್ಯಾತ ಸೈನ್ಯದ ಮೇಲೆ ಸೆಣಸಿ ನಾವು ಗೋವೆಯನ್ನು ಸ್ವಾಧೀನಪಡಿಸಿಕೊಳ್ಳಬೇಕಾಗಿದೆ. ಸಂಖ್ಯಾಬಲದಿಂದ ಅವರದ್ದು ಮೇಲ್ಗೈ. ನಮ್ಮ ಬಲ ಶ್ರೀಗುರುಕೃಪೆ – ಶ್ರೀಭುವನೇಶ್ವರಿಯ ಆಶೀರ್ವಾದ. ಮಹಾತಾಯಿ ನಿಮಗೆಲ್ಲಾ ರಣರಂಗದಲ್ಲಿ ಕೋಟಿ ಭುಜಬಲ ಒದಗಿಸುತ್ತಾಳೆ. ಅಂಜದೆ, ಅಳುಕದೆ ಶತ್ರುಗಳನ್ನೆದುರಿಸಿ – ಚಂದ್ರಗಿರಿಯ ಸಣ್ಣ ಸೇನೆ ಬಹಮನಿಯ ಅಕ್ಷೋಹಿಣಿಯನ್ನೆದುರಿಸಿ, ಸೋಲಿಸಿತು ಎನ್ನುವ ಕೀರ್ತಿಗಿಂತಲೂ ಹೆಚ್ಚಿನದೇನಿದೆ.

ಹೇಳಿ ಎಲ್ಲರೂ – ಜಯ್ ಭುವನೇಶ್ವರಿ."

ಚಂದ್ರಗಿರಿಯ ಸೈನ್ಯ ಒಕ್ಕೊರಲಿನಿಂದ ' ಜಯ್ - ಭುವನೇಶ್ವರಿ ' ಎಂದು ವೀರಘೋಷಣೆ ಮಾಡಿ, ಮುನ್ನಡೆಯಿತು.

ಹಗಲಿರುಳೆನ್ನದೆ ಪ್ರಯಾಣ ಮಾಡಿ, ಚಂದ್ರಗಿರಿ ಸೈನ್ಯ ಒಂದು ವಾರದಲ್ಲಿ ಗೋವೆ ಮುಟ್ಟಿತು.

ನಾಯಕರು, ಅವರ ದಣ್ಣಾಯಕರು ನಿರೀಕ್ಷಿಸಿದ್ದಂತೆ ಸುಲ್ತಾನನೇ ಬಹಮನಿಯ ಮಹಾಸೈನ್ಯವನ್ನು ತೆಗೆದುಕೊಂಡು ಗೋವೆಗೆ ಬಂದಿದ್ದ.

ಅವನ ಸೈನ್ಯದ ಪ್ರಮಾಣ ನೋಡಿದ ತಿಪ್ಪರಸಯ್ಯನವರು,

" ವಿಜಯನಗರದಿಂದ ನೆರವು ಬರದಿದ್ದರೆ ನಾವು ಉಳಿಯುವ ಸಂಭವವಿಲ್ಲ "

ಎನ್ನಲು ಚನ್ನಪ್ಪ ನಾಯಕರು.

"ವಿಜಯನಗರದಿಂದ ನೆರವು ಬರುವುದಿಲ್ಲ. ಸುಲ್ತಾನರ ಕೈಗೆ ಸಿಕ್ಕಿ ನಮ್ಮ ದೊರೆಗಳು ಪರಿತಪಿಸಬೇಕೆಂಬುದೇ ವಿರೂಪಾಕ್ಷರಾಯರ ಉದ್ದೇಶ " ಎಂದರು.

"ಮುಂದಿಟ್ಟ ಹೆಜ್ಜೆ ಹಿಂದೆಗೆಯಲಾಗುವುದಿಲ್ಲ. ನಾಳೆ ಯುದ್ಧರಂಭವಾಗಲಿ"

ಎಂದು ನರಸಿಂಹನಾಯಕರು ತಮ್ಮ ಅಂತಿಮ ನಿರ್ಧಾರ ಸೂಚಿಸಿದರು.

ಬೆಳಿಗ್ಗೆ ಉಭಯ ಪಕ್ಷದ ರಣ ಕಹಳೆಗಳು ಮೊಳಗಲು ಯುದ್ಧಾರಂಭ ವಾಯಿತು.

ಸುಲ್ತಾನನೊಂದು ಕಡೆ, ಮಹಮುದ್ ಗವಾನ್ ಒಂದು ಕಡೆ ತುಕಡಿಗಳನ್ನು ನಡೆಸುತ್ತಿದ್ದರು. ನರಸಿಂಹನಾಯಕರು ಮಿಂಚಿನಂತೆ ಸುಳಿದಾಡುತ್ತ ಎಲ್ಲ ಕಡೆಗಳಲ್ಲಿಯೂ ಕಾಣಿಸಿಕೊಳ್ಳುತ್ತಿದ್ದರು.

ಸಂಜೆ, ಯುದ್ಧವಿರಾಮದ ವೇಳೆಗೆ ಫಲಿತಾಂಶ ಅನಿರ್ದಿಷ್ಟವಾಯಿತು. ಚಂದ್ರಗಿರಿಯ ನೂರು ಜನ ಸೈನಿಕರು, ಬಹಮನಿಯ ಐವತ್ತು ಜನ ಸೈನಿಕರು ಮೃತ್ಯುವಶರಾಗಿದ್ದರು.

ಯುದ್ಧ ಮೂರು ದಿನ ಸತತವಾಗಿ ಸಾಗಿತು.

ನಾಯಕರ ರಣಕೌಶಲ್ಯ, ಧೀರಗಾಂಭೀರ್ಯ ಕಂಡು ಮಹಮುದ್ ಗವಾನ್ ಪರವಶನಾಗಿ,

" ಈತ ಮಹಾಪುರುಷ. ಕೈಬೆರಳಿನಲ್ಲಿ ಎಣಿಸುವಷ್ಟು ಸೈನಿಕರ ಬಲದಿಂದಲೇ ಹೀಗೆ ಹೋರಾಡುತ್ತಿರುವರಲ್ಲಾ - " ಎಂದರು.

ನಾಲ್ಕನೆಯ ದಿನ ಅಪರಾಹ್ನದ ವೇಳೆಗೆ ಚನ್ನಪ್ಪನಾಯಕರು ಮಡಿ ದುರುಳಿದರು. ಸಂಜೆಯ ವೇಳೆಗೆ ಚಂದ್ರಗಿರಿಯ ಸೈನ್ಯ ಶತ್ರುವಿನ ಆಘಾತ ತಡೆಯಲಾಗದೆ ಕಂಗೆಟ್ಟಿತು.

ನಾಯಕರು ದುಃಖವನ್ನು ನುಂಗಿಕೊಂಡು ಐದನೆಯ ದಿನ ರಣರಂಗಕೆ ಕಾಲಿಟ್ಟರು.

ಬಹಮನಿಯವರ ಹೊಡೆತಕ್ಕೆ ಸಿಕ್ಕಿ ಚಿಟ್ಟಿ ಗಂಗಣ್ಣ, ಅರವೀಟಿ ಬುಕ್ಕನಾಯಕರು ಗಾಯಗೊಂಡರು. ಅಂದು ಚಂದ್ರಗಿರಿಯ ಇನ್ನೂರು ಸೈನಿಕರು, ನೂರೈವತ್ತು ಕುದುರೆಗಳು ಸಾವಿಗೀಡಾದರು.

ರಾತ್ರಿ ಮಂತ್ರಾಲೋಚನ ಸಭೆ ಸೇರಿಸಿದ ನಾಯಕರು,

" ವಿಜಯನಗರದ ಸಹಾಯ ನಿರೀಕ್ಷಿಸಿಕೊಂಡು ಇಷ್ಟು ಕಾಲ ಯುದ್ಧ ಮುಂದುವರಿಸಿಯಾಯಿತು. ಇನ್ನು ಮೇಲೆ ಇದು ಯುದ್ಧವಾಗುವುದಿಲ್ಲ – ಕಗ್ಗೊಲೆಯಾಗುತ್ತದೆ. ನಾನೇ ನಿಮ್ಮೆಲ್ಲರನ್ನೂ ಕೈಯಾರೆ ಕೊಂದ ಪಾತಕಿ ಯಾಗುತ್ತೇನೆ. ಇರುಳ ತೆರೆಬಿದ್ದಿರುವಾಗಲೇ ನಾವೆಲ್ಲರೂ ಈ ಸ್ಥಳ ತ್ಯಜಿಸಿ ಹೋಗುವುದುತ್ತಮ."

" ನಮ್ಮ ಸೈನ್ಯ ನಿಶ್ಶೇಷವಾಗಿ ನಾಶವಾದರೂ ಚಿಂತೆಯಿಲ್ಲ – ನಾವು ರಣರಂಗ ಬಿಟ್ಟು ಪಲಾಯನ ಮಾಡಬಾರದು."

ಎಂದು ಈಶ್ವರನಾಯಕ ಸೂಚಿಸಿದ.

" ನಾನು ರಣಭೀರುವೂ ಅಲ್ಲ – ಕೊಲೆಪಾತಕಿಯೂ ಅಲ್ಲ ಈಶ್ವರ ನಾಯಕ. ತಾತ್ಕಾಲಿಕವಾಗಿ ನಾವು ಸೋಲನ್ನೊಪ್ಪಿಕೊಂಡು, ಮುಂದಿನ ಕರ್ತವ್ಯ ಯೋಚಿಸಬೇಕು. ನೀವುಗಳು ಜೀವಂತರಾಗಿದ್ದರೆ, ಗೋವೆಯನ್ನು ಇಂದಲ್ಲ – ನಾಳೆ ಗೆಲ್ಲಬಹುದು."

ಆಶಾಕಿರಣವೇ ಕಾಣದೆ ಶೂನ್ಯವಾಗಿದ್ದ ಆಗಸವನ್ನು ನೋಡುತ್ತ ದಣ್ಣಾಯಕರು.

" ಅಪ್ಪಣೆ " ಎಂದರು.

ಅದೇ ರಾತ್ರಿ ಅಳಿದುಳಿದಿದ್ದ ಚಂದ್ರಗಿರಿ ಸೈನ್ಯ ಗೋವೆಯ ರಣಭೂಮಿ ಯಿಂದ ಕಾಲ್ದೆಗೆಯಿತು.

ಗೋವೆಯ ವಿಜಯದಿಂದ ಉನ್ಮತ್ತನಾದ ಮಹಮದಾ ಷಹಾ, ಗವಾನ್‌ನನ್ನು ಆಂಧ್ರ ದಿಗ್ವಿಜಯಕ್ಕೆ ಕಳಿಸಿಕೊಟ್ಟ.

ಇದೇ ಕಾಲಕ್ಕೆ ತೆಲುಗುನಾಡಿನಲ್ಲಿ ಭೀಕರ ಕ್ಷಾಮ ತಲೆದೋರಲು, ಕೊಂಡವೀಡಿನ ಹಿಂದುಗಳು, ಅಲ್ಲಿನ ಬಹಮನಿ ಅಧಿಕಾರಿಯನ್ನು ಕೊಂದು, ಒರಿಸ್ಸಾದ ರಾಜನ ನೆರವು ಬೇಡಿದರು.

ಮಹಮದ್ ಗವಾನನ ನಾಯಕತ್ವದಲ್ಲಿ ಕೊಂಡವೀಡಿನ ಕಡೆ ಸಾಗಿ ಬಂದ ಬೃಹತ್ಸೇನೆಯನ್ನು ಕಂಡಕೂಡಲೆ ಒರಿಸ್ಸಾದ ಗಜಪತಿರಾಯ, ಓಡಿ ಹೋಗಿ ತನ್ನ ರಾಜ್ಯ ಸೇರಿಕೊಂಡ.

ಸುಲಭವಾಗಿ ಕೊಂಡವೀಡನ್ನು ಕೈವಶಪಡಿಸಿಕೊಂಡ ಗವಾ಼ನ್, ಒರಿಸ್ಸಾದತ್ತ ಸಾಗಲು, ಗಜಪತಿರಾಯ ಗವಾನನಿಗೆ ಹೇರಳವಾದ ಹೊನ್ನನ್ನೂ, ಆನೆ, ಕುದುರೆಗಳನ್ನೂ ಕೊಟ್ಟು ಸಂಧಿ ಮಾಡಿಕೊಂಡ. ಗವಾ಼ನ್ ರಾಜಮಹೇಂದ್ರಿಯ ಮೇಲೇರಿ ಹೋಗಿ, ಅದನ್ನೂ ಕೈವಶಪಡಿಸಿಕೊಂಡು ವಿಜೇತನಾಗಿ ಕಲ್ಬುರ್ಗಿಗೆ ಹಿಂದಿರುಗಿದ.

ತನ್ನ ಶೂರ ವಜೀರನನ್ನು ಸುಲ್ತಾನನೇ ಸ್ವಾಗತಿಸಿದುದಲ್ಲದೆ, ವಸ್ತ್ರ ವಿನಿಮಯ ಮಾಡಿಕೊಂಡು* ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸಿದ.

ತನಗೆ ಹೊಸದಾಗಿ ದೊರೆತಿದ್ದ ಸಂಪತ್ತು, ರಾಜ್ಯಕೋಶಗಳಿಂದ ಮಹಮದ್ ತೃಪ್ತನಾಗಲಿಲ್ಲ. ಇಡಿಯ ದಕ್ಷಿಣಭಾರತದ ಮೇಲೆ ಇಸ್ಲಾಮಿನ ನಕ್ಷತ್ರ, ಅರ್ಧಚಂದ್ರ ಬಾವುಟವನ್ನು ನೆಡಬೇಕೆಂಬುದೇ ಅವನ ಮಹತ್ವಾಕಾಂಕ್ಷೆಯಾಗಿತ್ತು.

ರಾಜ್ಯಾಧಿಕಾರವನ್ನು ಗವಾನನಿಗೆ ವಹಿಸಿ ಮಹಮದ್ ಮತ್ತೆ ದಿಗ್ವಿಜಯಕ್ಕೆ ಪ್ರಯಾಣ ಬೆಳಸಿದ.

---

* ವಸ್ತ್ರ ವಿನಿಮಯಮಾಡಿಕೊಳ್ಳುವುದು ಮುಸಲ್ಮಾನರಲ್ಲಿ ಅತ್ಯಂತ ಗೌರವದ ಸೂಚನೆ.

ಕಂಚಿಯಲ್ಲಿದ್ದ ಸಂಪತ್ತಿನ ಖ್ಯಾತಿ ಕೇಳಿದ್ದ ಸುಲ್ತಾನ, ಕಂಚಿಗೆ ಧಾವಿಸಿ, ದೇವಾಲಯಗಳನ್ನು ಸುಲಿದು, ನೂರಾರು ಹಿಂದುಗಳನ್ನು ಸಂಹರಿಸಿ ಗಾಂಜಿ ಕೋಟೆಯನ್ನು ಮುತ್ತಿದ.

ಗಾಂಜಿಯಲ್ಲಿ ಅಮಾನುಷ ರೀತಿಯಲ್ಲಿ ವರ್ತಿಸಿದ ಸುಲ್ತಾನ, ಸಹಸ್ರಾರು ಹಿಂದುಗಳನ್ನು ಮತಾಂತರಗೊಳಿಸಿ, ಗಾಂಜಿಯಲ್ಲಿದ್ದ ಹಿಂದೂ ದೇವಾಲಯ ಗಳನ್ನೆಲ್ಲಾ ನೆಲಸಮಗೊಳಿಸಿ, ಮಹೋತ್ಸಾಹದಿಂದ ರಾಜಧಾನಿಗೆ ಹಿಂದಿರುಗಿದ.

ಸುಲ್ತಾನ್ ಮಹಮದ್ ಮತ್ತು ಅವನ ವಜೀರ ಗವಾನನ ವಿಜಯ ಗಳನ್ನು ಕೇಳಿದ ವಿಜಯನಗರದ ಪ್ರಜೆಗಳು, ಸೈನಿಕರು ಕೋಪಾವಿಷ್ಟರಾದರು.

ಗೋವೆ ವಿಮೋಚನೆಗೆ ಹೋದ ನರಸಿಂಹನಾಯಕರ ಬಗ್ಗೆ ವಿರೂಪಾಕ್ಷ ರಾಯರು ತೋರಿದ್ದ ಅಸುಹೃದಯತೆ ಮಂತ್ರಿಮಂಡಳವನ್ನು ಅಸಂತೋಷ ಗೊಳಿಸಿತ್ತು.

ವಿರೂಪಾಕ್ಷರಾಯರ ತಾಟಸ್ಥ್ಯಧೋರಣೆಯಿಂದ ಸಾಮ್ರಾಜ್ಯದ ಅಸ್ತಿ ಭಾರವೇ ಅಲುಗಾಡುತ್ತಿದ್ದುದನ್ನು ಕಂಡ ಮಂತ್ರಿ ವಿಠ್ಠಲರಸ ಒಡೆಯರು ಪ್ರಭು ಗಳನ್ನು ಕಂಡು,

"ಕೊಂಡವೀಡು, ಕಂಚಿ, ರಾಜಮಹೇಂದ್ರಿ, ಗಾಂಜಿಗಳೂ ಬಹಮನಿ ಯವರ ವಶವಾದವು. ಗೋವೆ, ಬೆಳಗಾಂವಿ ಎಂದೋ ನಮ್ಮ ಕೈಬಿಟ್ಟು ಹೋಯಿತು. ಇದೇ ಪರಿಸ್ಥಿತಿ ಮುಂದುವರೆದರೆ ವಿಜಯನಗರ ಬಹಮನಿ ಮಾಂಡಲಿಕತನ ಒಪ್ಪಿಕೊಳ್ಳಬೇಕಾಗುತ್ತದೆ."

ಎಂದು ಅರಿಕೆ ಮಾಡಿದರು.

ಮಾತುಮಾತಿಗೆ ಕೋಪಿಸಿಕೊಳ್ಳುತ್ತಿದ್ದ ವಿರೂಪಾಕ್ಷರಾಯರು,

"ಅದಕ್ಕೆ ನಾವೇನು ಮಾಡಬೇಕಾಗಿತ್ತು."

"ಸಾಮ್ರಾಜ್ಯ ಸೈನ್ಯ ನರಸಿಂಹನಾಯಕರ ನೆರವಿಗೆ ಹೋಗ ಬೇಕಾಗಿತ್ತು."

"ನೀವೆಲ್ಲರೂ ಒಳಸಂಚು ಹೂಡಿ ನರಸಿಂಹನಾಯಕರನ್ನು ಪಟ್ಟಕ್ಕೇರಿಸ ಬೇಕೆಂದಿರುವಿರಾ ?"

"ಮಹಾಪ್ರಭುಗಳು ತಪ್ಪು ಮಾತಾಡುತ್ತಿದ್ದಾರೆ. ನಮ್ಮ ರಕ್ಷಣೆಗೆ

ಬಂದ ನರಸಿಂಹನಾಯಕರ ಕೈಬಿಟ್ಟುದು ಉಚಿತವಲ್ಲ. ಅವರ ರಾಜ್ಯಭಕ್ತಿ, ಸ್ವಾಮಿಭಕ್ತಿ ಶಂಕಾತೀತವಾದುದು. ತಾವು ವಿನಾಕಾರಣ ಸಾಮ್ರಾಜ್ಯ ನಿಷ್ಠ ಸೇವಕರ ವಿರೋಧ ಕಟ್ಟಿಕೊಳ್ಳುತ್ತಿರುವಿರಿ – ಈಚೆಗೆ ನಮಗಾಗಿರುವ ಸೋಲು. ಅಪಮಾನಗಳಿಗೆ ಜನರೂ, ಸೈನಿಕರೂ ಅಸಮಾಧಾನಗೊಂಡಿದ್ದಾರೆ."

"ವಿಜಯನಗರ ಸಾಮ್ರಾಜ್ಯದ ಪ್ರಭುಗಳು ನಾವೇ ವಿನಾ ನೀವಲ್ಲ – ರಾಜ್ಯಭಾರ ನಮ್ಮ ಇಚ್ಛೆಯಂತೆ ನಡೆಯಬೇಕು."

"ತಮ್ಮ ಮನಸ್ಸುಬಂದಂತೆ ರಾಜ್ಯಭಾರ ಮಾಡಿಕೊಳ್ಳಲು ಇಚ್ಛಿಸುವು ದಾದರೆ, ಮಾಡಿಕೊಳ್ಳಬಹುದು. ನಾನು ಮಂತ್ರಿಮಂಡಳದಲ್ಲಿ ಇರುವ ಅಗತ್ಯವಿಲ್ಲ."

"ಆಗಬಹುದು. ನಿಮ್ಮ ಅಧಿಕಾರಲಾಂಛನಗಳನ್ನು ತಿರುಮಲನಾಯಕ ರಿಗೆ ಒಪ್ಪಿಸಿಬಿಡಿ" ಎಂದರು.

ವಿಠ್ಠಲರಸರ ಒಡೆಯರ ಪ್ರತಿಭಟನೆಯನ್ನು ಸಹಿಸಲಾಗದೆ, ವಿರೂಪಾಕ್ಷ ರಾಯರು, ಅವರನ್ನು ಕೆಲಸದಿಂದ ನಿವೃತ್ತಿಗೊಳಿಸಿದುದಲ್ಲದೆ, ಗೃಹಬಂಧನ ಕ್ಕೊಳಗಾಗಿಸಿ, ಕಾವಲಿಗೆ ಕುಚೇಲನಾಯಕನನ್ನು ನೇಮಿಸಿದರು.

ವಿಠ್ಠರಸರ ಬಂದೀವಾಸದ ಕಾವಲು ಕಾಯುವ ಅಪ್ರಿಯ ಕೆಲಸವನ್ನೊಪ್ಪಿ ಕೊಂಡ ಕುಚೇಲನಾಯಕ ಒಂದು ದಿನ,

"ಸಾಮ್ರಾಜ್ಯ ಕಟ್ಟುವುದಕ್ಕಿಂತ ಕೆಡಹುವುದು ಬಹಳ ಸುಲಭವಲ್ಲವೇ ಒಡೆಯರೇ" ಎಂದು ಕೇಳಿದ.

"ಸಾಮ್ರಾಜ್ಯವನ್ನು ನಾಮಾವಶೇಷಗೊಳಿಸುತ್ತಾ ವಿರೂಪಾಕ್ಷರಾಯರು ಆಚಂದ್ರಾರ್ಕ ಕೀರ್ತಿ ಗಳಿಸುತ್ತಿದ್ದಾರೆ."

"ಪರಿಸ್ಥಿತಿ ಸುಧಾರಿಸುವುದು ಹೇಗೆ ?"

"ಮಹಾಕ್ರಾಂತಿಯಿಂದ !"

"ಹಾಗಂದರೆ ?"

"ನನ್ನ ಮನಸ್ಸಿನಲ್ಲಿರುವುದನ್ನು ಹೇಳಿಬಿಡುತ್ತೇನೆ. ಸಾವಧಾನದಿಂದ ಲಾಲಿಸಿ."

"ಅಪ್ಪಣೆಯಾಗಲಿ."

ವಿರೂಪಾಕ್ಷರಾಯರ ಆಡಳಿತ ಎಲ್ಲರಿಗೂ ಬೇಸರಿಕೆಯನ್ನುಂಟು

ಮಾಡಿದೆ. ಈವರಿಗೆ ನಾವೂ ನೋಡಿದ್ದಾಯಿತು – ಪ್ರಭುಗಳು ಸುಧಾರಿಸುವ ಸಂಭವವೇ ಇಲ್ಲ. ಸೈನ್ಯದಲ್ಲಿ ಅಸಂತೋಷ ತುಂಬಿ ತುಳುಕಾಡುತ್ತಿದೆ. ನಮ್ಮ ಕೈಬಿಟ್ಟು ಹೋಗಿರುವ ಪ್ರದೇಶಗಳನ್ನು ನಾವು ಕೈವಶಪಡಿಸಿಕೊಳ್ಳ ದಿದ್ದರೆ ಸೈನ್ಯ ದಂಗೆ ಏಳುವ ಸಂಭವವಿದೆ ?"

" ಹೇಗೆ ವಶಪಡಿಸಿಕೊಳ್ಳುವುದು ವಿಠ್ಠರಸರೇ, ಪ್ರಭುಗಳು ತಾವೂ ಹೋಗುವುದಿಲ್ಲ ; ನಮ್ಮನ್ನೂ ಕಳಿಸುವುದಿಲ್ಲ."

" ಅದಕ್ಕೊಂದೇ ಉಪಾಯ. ನರಸಿಂಹನಾಯಕರಿಗೆ ಸುದ್ದಿ ಕಳುಹಿಸಿ. ಅವರ ಗೋವೆಯ ಮೇಲೇರಿ ಹೋಗಲಿ – ಇಲ್ಲಿಂದ ನಾವು ಗುಪ್ತವಾಗಿ ನಮ್ಮ ಸೈನ್ಯಗಳನ್ನು ಅವರ ನೆರವಿಗೆ ಕಳಿಸಿಕೊಡೋಣ."

" ಹಿಂದಿನ ಅನುಭವ ನರಸಿಂಹನಾಯಕರಿಗೆ ಇಷ್ಟು ಬೇಗ ಮರೆತು ಹೋಗಿದೆಯೇ ? ಅವರು ನಮ್ಮನ್ನು ನಂಬುತ್ತಾರೆಯೇ ?"

"ನಾನು ಪತ್ರ ಬರೆದುಕೊಡುತ್ತೇನೆ. ಅದನ್ನು ನಂಬಿಗಸ್ಥ ಆಳಿನೊಂದಿಗೆ ಚಂದ್ರಗಿರಿಗೆ ಕಳಿಸಿಕೊಡಿ. ನನ್ನ ಸೂಚನೆಯನ್ನು ಅವರು ಉಪೇಕ್ಷೆಮಾಡುವು ದಿಲ್ಲ. ಸಿಂಗಪ್ಪ ದಣ್ಣಾಯಕರಿಗೆ ಈ ವಿಷಯ ತಿಳಿಸಿ. ಸೈನ್ಯಗಳು ರಹಸ್ಯ ವಾಗಿ ಗೋವೆ ಸೇರಲು ಅವರು ವ್ಯವಸ್ಥೆ ಮಾಡುತ್ತಾರೆ. ನಾವು ನರಸಿಂಹ ನಾಯಕರನ್ನೇ ಮಹಾದಂಡಾಧಿಕಾರಿಗಳನ್ನಾಗಿ ನೇಮಿಸಿಕೊಂಡು, ಸಾಮ್ರಾಜ್ಯದ ಗತಗೌರವವನ್ನು ಪುನರಾರ್ಜಿಸಬೇಕು."

" ಚಾಚೂ ತಪ್ಪದಂತೆ ತಮ್ಮ ಆಜ್ಞೆ ಪಾಲಿಸುತ್ತೇನೆ."

ಎಂದು ಕುಚೇಲನಾಯಕ ಆಶ್ವಾಸನವಿತ್ತ.

ಸುಲ್ತಾನ್ ಮಹಮದರು ಕಂಚಿಯಿಂದ ಕಾಲ್ತೆಗೆಯುವುದನ್ನೇ ಕಾದಿದ್ದ ಕಂಚಿಯ ಹಿಂದೂಗಳು ದಂಗೆಯೆದ್ದರು. ಈ ದಂಗೆಯನ್ನಡಗಿಸಿ ಬರಲು ಸುಲ್ತಾನರು, ಗವಾನನನ್ನು ಕಳಿಸಿಕೊಟ್ಟರು.

ಗವಾನನನ್ನು ಮೊದಲಿನಿಂದಲೂ ದ್ವೇಷಿಸುತ್ತಿದ್ದ ಜಾತಿಗೆಟ್ಟ ನಿಜಾಮು ನೆನ್ನುವ ಸರ್ದಾರ, ಗವಾನನ ಇತಿಶ್ರೀ ಮಾಡಲು ಪಿತೂರಿ ನಡೆಸುತ್ತಿದ್ದ.

ನಿಜಾಮನ ಸರ್ವಶ್ರೇಯಸ್ಸಿಗೂ ಗವಾನ್ ಮುಖ್ಯ ಕಾರಣನಾಗಿದ್ದರೂ, ಕೃತಜ್ಞತೆ ಅವನನ್ನು ಬಾಧಿಸಲಿಲ್ಲ.

ದೇಶಸ್ಥ ಬ್ರಾಹ್ಮಣನಾಗಿದ್ದ ನಿಜಾಮು, ಒಂದು ಯುದ್ಧದಲ್ಲಿ ಬಹಮನಿಯವರಿಗೆ ಸೆರೆಸಿಕ್ಕಿದ. ಬಹಮನಿಯ ಸೈನ್ಯಾಧಿಕಾರಿಯಾಗಿದ್ದ ದಿಲಾವರ್ ಖಾನ್, ಅವನಿಗೆ ಆಸೆ ತೋರಿಸಿ, ಇಸ್ಲಾಮಿಗೆ ಮತಾಂತರಗೊಳಿಸಿ ನಿಜಾಮುನೆಂದು ನಾಮಕರಣ ಮಾಡಿದ. ನಿಜಾಮನ ಚಾಣಾಕ್ಷತೆಯನ್ನು ಕಂಡು ಮೆಚ್ಚಿಕೊಂಡ ಗವಾನ್, ಅವನ ಪ್ರಾಪಂಚಿಕ ಪರಿಸ್ಥಿತಿಯನ್ನು ಸುಧಾರಿಸಿ, ತೆಲುಗಾಣ್ಯದ ರಾಜಪ್ರತಿನಿಧಿ ಪದವಿಯನ್ನು ಅನುಗ್ರಹಿಸಿದ.

ಓರಗಲ್ಲು ಪ್ರಾಂತ್ಯ ಇಬ್ಭಾಗವಾಗಿ, ಮುದ್ಗಲು, ವಿಜಾಪುರ, ರಾಯಿಚೂರುಗಳು ನಿಜಾಮುನ ಕೈಬಿಟ್ಟು ಹೋಗಲು, ಅವನು ಅತೃಪ್ತನಾಗಿ ಒಳಗೊಳಗೇ ಗವಾನನ ಮೇಲೆ ದ್ವೇಷ ಸಾಧಿಸುತ್ತಿದ್ದ.

ಗವಾನನ ಅದೃಷ್ಟಚಕ್ರದ ಮುಂದೆ ನಿಜಾಮನ ಆಟ ಸಾಗಲಿಲ್ಲ. ದಿಗ್ವಿಜಯಗಳ ಮೇಲೆ ದಿಗ್ವಿಜಯಗಳನ್ನು ಮಾಡಿ ಸುಲ್ತಾನರಿಗೆ ಹೇರಳ ಸಂಪತ್ತನ್ನೂ, ಗಡಿ ಪ್ರದೇಶಗಳನ್ನು ದೊರಕಿಸಿ ಕೊಟ್ಟಿದ್ದ ಗವಾನನ ಬಗ್ಗೆ ಸುಲ್ತಾನರು ಪೂರ್ಣ ನಂಬಿಕೆ, ಗೌರವ ತಳೆದಿದ್ದರು.

ಕಂಚಿಯಿಂದ ಗವಾನ್ ಹಿಂದಿರುಗಿ ಬರುವುದೊಳಗಾಗಿ ಅವನ ಇತಿಶ್ರೀ ಮಾಡಿಬಿಡಲು ನಿರ್ಧರಿಸಿದ ನಿಜಾಮು, ದಖನಿಯವನಾದ ಸರೀಫುಲ್ ಮುಲ್ಕನನ್ನೂ, ಹಬಸಿಯವನಾದ ಮಿಷ್ಟಾಹ ಹಬಿಯನ್ನೂ ಬರಮಾಡಿಕೊಂಡು,

" ಹೇಗಾದರೂ ಮಾಡಿ ಗವಾನನ ತೇಜೋಭಂಗ ಮಾಡಿ. ಸುಲ್ತಾನರು ಅವನ ಬಗ್ಗೆ ಅಸಂತುಷ್ಟರಾದರೆ, ನನಗೆ ವಜೀರ ಪದವಿ ದೊರೆಯುತ್ತದೆ. ಆಗ ನಾನು ನಿಮ್ಮಿಬ್ಬರನ್ನೂ ಕಿಲ್ಲೇದಾರರನ್ನಾಗಿ ನೇಮಿಸುತ್ತೇನೆ."

ಎಂದು ಹೇಳಿ ಅವರ ಕೈಗಳನ್ನು ಹೊನ್ನಿನಿಂದ ತುಂಬಿದ.

ಸರೀಫುಲ್ ಮುಲ್ಕ್, ಮಿಷ್ತಾಷ ಹಬಿ ಉಪಾಯಂತರದಿಂದ ಗವಾನನ ಆಪ್ತ ಸೇವಕ ಕಮ್ರುದ್ದೀನನ ಸ್ನೇಹ ಬೆಳಸಿದರು.

ಒಂದು ದಿನ ಕಮ್ರುದ್ದೀನನಿಗೆ ಅಮಿತವಾಗಿ ಸುರಾಪಾನ ಮಾಡಿಸಿದ ಉಭಯ ಸಂಚುಗಾರರು, ಅವನಿಗೆ ಒಂದು ಕಾಗದ ತೋರಿಸಿ,

" ನಮ್ಮ ಮಿತ್ರನೊಬ್ಬನಿಗೆ ಸೈನ್ಯದಲ್ಲಿ ಕೆಲಸ ಕೊಡಿಸಲು ಯತ್ನಿಸುತ್ತಿದ್ದೇವೆ. ಮುಖ್ಯ ಮುಖ್ಯ ಸೈನ್ಯಾಧಿಕಾರಿಗಳೆಲ್ಲಾ ತಮ್ಮ ಮೊಹರು ಮಾಡಿದ್ದಾರೆ; ವಜೀರರ ಮೊಹರು ಬಿತ್ತೆಂದರೆ ನಮ್ಮ ಮಿತ್ರ ಉದ್ಧಾರವಾಗುತ್ತಾನೆ " ಎಂದರು.

ಅವರ ಮಾತನ್ನು ನಂಬಿದ ಕಮ್ರುದ್ದೀನ್ ಗವಾನನ ಮೊಹರನ್ನು ತಂದು ಕಾಗದದ ಮೇಲೆ ಒತ್ತಿದ. ನಿಜಸ್ಥಿತಿ ಎಲ್ಲಿ ಬಯಲಿಗೆ ಬರುವುದೋ ಎಂದು ಆ ನೀಚರು, ಕಮ್ರುದ್ದೀನನ್ನು ಅದೇ ರಾತ್ರಿ ವಧಿಸಿ, ಸುಲ್ತಾನರನ್ನು ಕಂಡು ಅವರಿಗೆ ಪತ್ರ ಒಪ್ಪಿಸಿದರು.

ಪತ್ರ ಓದುತ್ತಿದ್ದ ಸುಲ್ತಾನರು ತಮ್ಮ ಕಣ್ಣನ್ನು ತಾವೇ ನಂಬದಾದರು. ಆದರೆ ನಂಬಲೇ ಬೇಕಾಗಿದೆ – ಪತ್ರದ ಮೇಲೆ ಮುಖ್ಯ ವಜೀರರ ಮೊಹರು ಬಿದ್ದಿದೆ.

" ಮಹಾರಾಜಾಧಿರಾಜ, ಓಡ್ರ ದೇಶದ ಶ್ರೀ ಗಜಪತಿ ದೊರೆಗಳ ಸನ್ನಿಧಿಗೆ. ಬಹಮನಿ ರಾಜ್ಯದ ಮುಖ್ಯ ವಜೀರ್ ಖಾಜಾಜಿಹಾನ್, ಗುಲಾಂ ಮಹಮದ್ ಗವಾನ್ ಖಾಜಾ ಅಮರುದ್ದೀನನ ಸಾವಿರ ಸಲಾಮುಗಳು,

ಬಹಮನಿ ರಾಜ್ಯ ಅನಾಯಕ ಪಾಳ್ಯವಾಗಿದೆ. ಸುಲ್ತಾನ ಮಹಮದರು ವಿಷಯಾಸಕ್ತರಾಗಿ ಸದಾಕಾಲ ಮದಿರೆ, ಮಾನಿನಿಯರ ಗುಲಾಮರಾಗಿರುತ್ತಾರೆ. ದಖನ್ ರಾಜ್ಯವನ್ನು ಜಯಿಸುವುದು ಈಗ ಅತಿ ಸುಲಭ. ರಾಜಮಹೇಂದ್ರಿಯಲ್ಲಿ ಪ್ರಬಲ ಅಧಿಕಾರಿಯಿಲ್ಲ, ನೀವು ಸುಲಭವಾಗಿ

ರಾಜಮಹೇಂದ್ರಿಯನ್ನು ವಶಪಡಿಸಿಕೊಳ್ಳಬಹುದು. ಸುಲ್ತಾನ್ ಮಹಮದರನ್ನು ನಿವಾರಿಸಲು ನೀವು ನನಗೆ ಸಹಾಯ ಮಾಡುವುದಾದರೆ ನಾವು ರಾಜ್ಯವನ್ನು ಸಮಭಾಗ ಮಾಡಿಕೊಳ್ಳಬಹುದು. ಬಹಮನಿ ರಾಜ್ಯದ ದೊಡ್ಡ ದೊಡ್ಡ ಅಧಿಕಾರಿಗಳು, ದಳವಾಯಿಗಳು ನನ್ನ ಕಡೆ ಇದ್ದಾರೆ."

ಅಸ್ತವ್ಯಸ್ತರಾದ ಸುಲ್ತಾನರು ನಿಜಾಮನನ್ನು ಬರಮಾಡಿಕೊಂಡು,

" ನಿಜಸ್ಥಿತಿ ಏನು ?" ಎಂದು ಕೇಳಿದರು.

" ರಾಜ್ಯವನ್ನು ತಮ್ಮಿಂದ ಕಸಿದುಕೊಳ್ಳಲು ಗವಾ‍ರ್ ಯತ್ನಿಸುತ್ತಿದ್ದಾನೆ ಜಹಾಪನಾ. ಓಡ್ರ ದೇಶಕ್ಕೆ ಈ ಕಾಗದವನ್ನೊಯ್ಯುತ್ತಿದ್ದ ಗವಾನರ ಆಳು ಕಮ್ರುದ್ದೀನನಿಂದ ಕಸಿದುಕೊಂಡು, ಹುಜೂರರಿಗೆ ಒಪ್ಪಿಸಲಾಗಿದೆ."

" ಕಮ್ರುದ್ದೀನ್ ಎಲ್ಲಿ ?"

" ತನ್ನ ಕೃತ್ರಿಮ ಬಯಲಿಗೆ ಬಂತೆಂದು ಹೆದರಿ ಅವನು ಓಡಿ ಹೋಗಿದ್ದಾನೆ."

ಉದ್ದೀಪ್ತರಾದ ಸುಲ್ತಾನರು ಗವಾನನನ್ನು ಹಿಡಿದು ತರಲು ನಿಜಾಮನನ್ನೇ ಕಳಿಸಿಕೊಟ್ಟರು.

ನಿಜಾಮ ತೊಡಿಸಿದ ಕೈಕೋಳಗಳನ್ನು ಧರಿಸಿ, ಬಂದು ಎದುರು ನಿಂತ ಗವಾನನನ್ನು ತುಚ್ಛ ಮಾತುಗಳಿಂದ ಹೀಗಳೆದ ಸುಲ್ತಾನರು, ಅವನತ್ತ ಕಾಗದ ಬಿಸುಟು,

" ಇದೇನು ನೋಡು ಗುಲಾಮ " ಎಂದರು.

ಗವಾ‍ರ್ ಪತ್ರವನ್ನು ಪರೀಕ್ಷಿಸಿ ನೋಡಿ,

" ಮೊಹರೇನೋ ನನ್ನದೇ – ಆದರೆ ಕಾಗದ ನನ್ನದಲ್ಲ. ಯಾರೋ ಶತ್ರುಗಳು ಈ ಪಿತೂರಿ ಮಾಡಿ, ತಮಗೆ ಸುಳ್ಳುಸುದ್ದಿ ಇತ್ತಿದ್ದಾರೆ."

"ಸ್ವಾಮಿದ್ರೋಹ ಮಾಡಿದ ಗುಲಾಮನಿಗೆ ಯಾವ ಶಿಕ್ಷೆ ವಿಧಿಸಬೇಕು?"

" ಮರಣದಂಡನೆ."

ರೋಷಾಕ್ರಾಂತರಾದ ಸುಲ್ತಾನರು, ಪೂರ್ವಾಪರ ವಿವೇಚನೆಯಿಲ್ಲದೆ, ಹತ್ತಿರದಲ್ಲಿದ್ದ ಹಬಸಿ ಆಳು ಜೌಹರನಿಗೆ,

" ಈ ನಮ್ಕ್‌ ಹರಾಮನ ಪ್ರಾಣ ತೆಗೆದು ಬಿಡು "

ಎಂದು ಆಜ್ಞೆ ವಿಧಿಸಿದರು.

ನಿರ್ವಿಕಲ್ಪಚಿತ್ತನಾಗಿ ನಿಂತಿದ್ದ ಪೂರ್ಣ ತೇಜಸ್ವಿ ಗವಾನನ ಕಣ್ಣು ಗಳಿಂದ ಹರಿದ ಬಿಂದುಗಳು, ಅವನ ನೀಳಗಡ್ಡದ ಮೇಲೆ ಹರಿದವು.

" ನೀನು ಕಣ್ಣೀರು ಹಾಕಿದರೆ ಮನಕರಗಿ, ನಾವು ಕ್ಷಮಿಸುವೆವೆಂದು ಭಾವಿಸಿರುವೆಯಾ "

ಎಂದು ಸುಲ್ತಾನರು ಆರಂಭಿಸಿದರು.

" ನಾನು ಕ್ಷಮೆಬೇಡುವುದೂ ಇಲ್ಲ – ತಾವು ಕ್ಷಮಿಸಬೇಕಾದ ಅಗತ್ಯವೂ ಇಲ್ಲ. ತಪ್ಪು ಮಾಡಿದವನು ಕ್ಷಮೆ ಬೇಡಬೇಕು – ನಾನು ನಿರಪರಾಧಿ."

" ನಿರಪರಾಧಿ !"

" ನೀವು ನಂಬದಿರಬಹುದು ಸರ್ಕಾರ್ – ಖುದಾ ನಂಬುತ್ತಾನೆ. ಮನುಷ್ಯ ಎಂದಾದರೊಂದು ದಿನ ಪ್ರಾಣ ಒಪ್ಪಿಸಲೇಬೇಕು. ಹೋಗುವ ಪ್ರಾಣಕ್ಕೆ ಹಲುಬುವವನು ಮೂರ್ಖ – ನನ್ನ ಕಣ್ಣಲ್ಲಿ ನೀರು ಬಂದದ್ದು ನಿಮಗಾಗಿ – ಇನ್ನು ಏಳೇ ವರ್ಷಗಳಲ್ಲಿ ನಿಮ್ಮ ರಾಜ್ಯ ನುಚ್ಚುನೂರಾಗಿ ಬಹಮನಿ ಎನ್ನುವ ಹೆಸರೇ ತೊಡೆದು ಹೋಗುವುದಲ್ಲಾ ಎಂದು ದುಃಖಿಸಿದೆ."

ಕೋಪೋದ್ದೀಪಿತರಾದ ಸುಲ್ತಾನರು, ಜೌಹರನನ್ನು ನೋಡಿ.

" ತಡವೇಕೆ ಗುಲಾಮ " ಎಂದರು.

ಗವಾ೯ ಮೊಣಕಾಲೂರಿ ಕುಳಿತು ನಮಾಜ್ ಮುಗಿಸಿ

" ಬಿಸ್ಮಿಲ್ಲಾ " ಎಂದ.

ಜೌಹರನ ಕ್ರೂರಖಡ್ಗ ಗವಾನನ ಕುತ್ತಿಗೆಯ ಮೇಲಿಳಿದು, ಅವನ ರುಂಡ, ಮುಂಡವನ್ನು ಬೇರ್ಪಡಿಸಿತು.

## ೨೦

ವಿಠ್ಠರಸ ಒಡೆಯರ ಆಶ್ವಾಸನ ಬಂದಕೂಡಲೆ ನರಸಿಂಹನಾಯಕರು ಸೈನ್ಯಸಮೇತರಾಗಿ ಗೋವೆಯತ್ತ ಸಾಗಿದರು. ಮಧ್ಯ ಮಾರ್ಗದಲ್ಲಿ ತಿರುಮಲನಾಯಕ, ಸಿಂಗಪ್ಪನಾಯಕರ ಸೈನ್ಯಗಳು ಅವರನ್ನು ಕೂಡಿ ಕೊಂಡವು.

ಗೋವೆಯ ದುರ್ಗಾಧಿಪತಿ, ನಾಯಕರ ಸೈನ್ಯ ಬರುತ್ತಿರುವುದನ್ನು ತಿಳಿದು, ಕಲ್ಬುರ್ಗಿಗೆ ಆಳುಕಳಿಸಿ ಸಹಾಯ ಬೇಡಿದ.

ಹುತಾತ್ಮ ಗವಾನನಿಗೆ ಒದಗಿದ ದುರ್ಗತಿ ಕೇಳಿದ ಕಲ್ಬುರ್ಗಿಯ ಜನ ದಂಗೆಯೆದ್ದು, ನಿಜಾಮುನನ್ನು ಗಲ್ಲಿಗೇರಿಸಿದರು.

ಪ್ರಜೆಗಳನ್ನು ಎದುರಿಸಲಾಗದೆ ಸುಲ್ತಾನ್ ಮಹಮದರು ರಾಜಮಹಲಿನಲ್ಲಿ ಅಡಗಿ ಕುಳಿತರು.

ನಿರೀಕ್ಷಿಸಿದ ಸಹಾಯ ಒದಗದಿರಲು ಗೋವೆಯ ದುರ್ಗಾಧಿಪತಿ ನರಸಿಂಹನಾಯಕರಿಗೆ ಶರಣಾಗತನಾದ.

ಗೋವೆಯನ್ನು ಕಸಿದುಕೊಂಡ ಮೇಲೆ ನಾಯಕರು ಬೆಳಗಾಂವಿ, ಕೊಂಡವೀಡು, ರಾಜಮಹೇಂದ್ರಿ, ಗಾಂಜಿಯನ್ನು ವಶಪಡಿಸಿಕೊಂಡು ಕಂಚಿಗೆ ಬಂದರು.

ಕಂಚಿಯ ತರಫ್‌ದಾರ ಅಸಾದುಲ್ಲಾ ಖಾನ್ ನಾಯಕರಿಗೆ ಮಣಿಯಲಿಚ್ಛಿಸದೆ ಯುದ್ಧ ಸಿದ್ಧನಾದ.

ಒಂದೇ ದಿನದಲ್ಲಿ ನಾಯಕರ ಸೈನ್ಯ, ಅಸಾದುಲ್ಲಾ ಖಾನನನ್ನೂ ಅವನ ಸೈನ್ಯವನ್ನೂ ನಿಪಾತಗೊಳಿಸಿದವು.

ನಾಯಕರು ಗಳಿಸಿದ ಅಭೂತಪೂರ್ವ ವಿಜಯ ಎಲ್ಲರನ್ನೂ ಪರಮಾನಂದ ಗೊಳಿಸಿತ್ತು.

ಮುಂದಿನ ಕಾರ್ಯಕ್ರಮ ನಿಶ್ಚಯಿಸಲು ಕಂಚಿಯಲ್ಲೇ ಸಮಸ್ತ ದಣ್ಣಾಯಕರ ಸಭೆ ಸೇರಿತು.

ನರಸಿಂಹನಾಯಕರ ಮುಂದೆ ವಿಚಾರ ಮಂಡಿಸುವ ಪೂರ್ವದಲ್ಲಿ ಸಭೆ ಸೇರಿದ ತಿರುಮಲೆ ನಾಯಕ, ಸಿಂಗಪ್ಪನಾಯಕ, ನಾಗಮನಾಯಕ, ಚಿಟ್ಟೆ ಗಂಗಣ್ಣ, ಅರವೀಟಿ ಬುಕ್ಕನಾಯಕ, ಈಶ್ವರನಾಯಕ, ನರಸನಾಯಕ, ತಿಪ್ಪರಸಯ್ಯನವರು ವಿಚಾರ ವಿನಿಮಯ ಮಾಡಿಕೊಂಡು ಒಂದು ನಿರ್ಧಾರಕ್ಕೆ ಬಂದರು.

ಆ ಶಿಷ್ಟ ಮಂಡಳಿಯ ಮುಖಂಡರಾಗಿ ಅರವೀಟಿ ಬುಕ್ಕನಾಯಕರೂ, ತಿರುಮಲೆನಾಯಕರೂ ಚುನಾಯಿತರಾದರು.

ನರಸಿಂಹನಾಯಕರ ಬಳಿಗೆ ಬಂದ ಶಿಷ್ಟ ಮಂಡಳಿ

" ತಮ್ಮ ಧೀರ ಮುಂದಾಳುತನ, ಅನುಪಮ ವಿಕ್ರಮದಿಂದ ಸಾಮ್ರಾಜ್ಯದ ಗೌರವ ಉಳಿಯಿತು. ಆದರಿದು ತಾತ್ಕಾಲಿಕ ವಿಜಯ. ಪರಿಸ್ಥಿತಿ ಸುಧಾರಿಸದಿದ್ದರೆ, ಇದೇ ಸಮಸ್ಯೆ ಮತ್ತೆ ಮತ್ತೆ ತಲೆದೋರುತ್ತದೆ. ತಾವೀಗ ವೈಯಕ್ತಿಕ ಭಾವನೆ, ವಿಚಾರ, ಶಂಕೆಗಳನ್ನೆಲ್ಲಾ ಬದಿಗೊತ್ತಿ ರಾಷ್ಟ್ರ ಕಲ್ಯಾಣ ಸಾಧಕವಾದ ನಮ್ಮ ಸಲಹೆ ಅಂಗೀಕರಿಸಬೇಕು."

" ನಾಯಕರೇ – ನಾವು ಕೇವಲ ನಿಮಿತ್ತಮಾತ್ರ ! ನಿಮ್ಮೆಲ್ಲರ ಭುಜ ಬಲ ಪರಾಕ್ರಮ, ನಮ್ಮ ಸೈನಿಕರ ಅನನ್ಯ ದೇಶಭಕ್ತಿಯ ಪ್ರಭಾವದಿಂದ ನಮಗೆ ಜಯ ಸಿದ್ಧಿಸಿತು. ರಾಷ್ಟ್ರ ಕಲ್ಯಾಣಸಾಧಕವಾದ ಯಾವ ಸಲಹೆ ಯನ್ನು ನೀವಿತ್ತರೂ ಅಂಗೀಕರಿಸಲು ನಾನು ಸಿದ್ಧನಾಗಿದ್ದೇನೆ."

" ಪ್ರಭೂ – ತಾವು ಸಾಮ್ರಾಜ್ಯದ ರತ್ನಕಿರೀಟ ಒಪ್ಪಿಸಿಕೊಂಡು, ವಿರೂಪಾಕ್ಷರಾಯರ ದುರಾಡಳಿತದಿಂದ ನಮ್ಮನ್ನು ಪಾರುಮಾಡಬೇಕು."

ಎಂದು ತಿರುಮಲೆ ನಾಯಕರು ಪ್ರಾರ್ಥಿಸಲು, ಸ್ತಂಭೀಭೂತರಾದ ನರಸಿಂಹನಾಯಕರು,

" ಸಾಮ್ರಾಜ್ಯ ಸಿಂಹಾಸನದ ಕಬಳಿಸಲು ನಮಗೆ ಸ್ವಲ್ಪವೂ ಇಷ್ಟವಿಲ್ಲ. ಈ ಬಗ್ಗೆ ತಾವು ನನ್ನನ್ನು ಒತ್ತಾಯ ಪಡಿಸಬಾರದಾಗಿ ಪ್ರಾರ್ಥಿಸುತ್ತೇನೆ."

" ವಿಜಯನಗರ, ಬಹಮನಿಯ ಮಾಂಡಲಿಕತ್ವವನ್ನು ಒಪ್ಪಿಕೊಳ್ಳು ವುದು ತಮಗೆ ಸಮ್ಮತವಾದರೆ ಆಗಬಹುದು."

" ವಿರೂಪಾಕ್ಷರಾಯರು ಅಷ್ಟು ದುರ್ಬಲರಲ್ಲ !"

" ತಾವು ಚಂದ್ರಗಿರಿಯಲ್ಲಿ ಸುಖವಾಗಿ ಕುಳಿತಿರುವಿರಿ; ರಾಜಧಾನಿಯ

ವಾಸಿಗಳಾದ ನಮಗೆ ವಿರೂಪಾಕ್ಷರಾಯರ ಸಹವಾಸ ಸಾಕು ಸಾಕಾಗಿ ಹೋಗಿದೆ. ವಿರೂಪಾಕ್ಷರಾಯರ ಕೈಯಲ್ಲಿಂತೂ ರಾಜ್ಯ ಉಳಿಯುವುದಿಲ್ಲ – ತಾವು ಒಲ್ಲೆಯೆಂದರೆ ಬೇರೆ ಯಾರಾದರೂ ಕಬಳಿಸಿಬಿಡುತ್ತಾರೆ –"

"ವಿರೂಪಾಕ್ಷರಾಯರನ್ನು ಸುಧಾರಿಸಲು ಶಕ್ಯವಿಲ್ಲವೇ ?"

"ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗುತ್ತದೆಯೇ ?"

"ಸಾಮ್ರಾಜ್ಯದ ಇತಿಹಾಸದಲ್ಲಿ ಇದು ಪರ್ವಕಾಲ. ಈ ಕಾಲದ ಆಡಳಿತ ದಕ್ಷತೆಯಿಂದ ಸಾಗದಿದ್ದರೆ ಮಹರ್ಷಿ ಶ್ರೀ ವಿದ್ಯಾರಣ್ಯ ಗುರುಗಳು ಕಟ್ಟಿದ ಮಹಾಸೌಧ ಕುಸಿದು ಬೀಳುತ್ತದೆ. ಸಾಮ್ರಾಜ್ಯದ ಭವಿಷ್ಯದ ಸಲುವಾಗಿ, ದೇಶಭಕ್ತರಾದ ಸಹಸ್ರಾರು ಪ್ರಜರ ಸಲುವಾಗಿ, ಹಿಂದೂ ಧರ್ಮದ ಉದ್ಧಾರದ ಸಲುವಾಗಿ ತಾವು ಸಾಮ್ರಾಜ್ಯ ಸಿಂಹಾಸನವನ್ನಲಂಕರಿಸಬೇಕು"

ಎಂದು ಬುಕ್ಕನಾಯಕರು ಕಳಕಳಿಯಿಂದ ಬೇಡಿದರು.

ತಮ್ಮ ನಕಾರದಿಂದ ಮ್ಲಾನವದನರಾಗಿ ನಿಂತಿದ್ದ ವೀರನಾಯಕರ ಮುಖಾವಲೋಕನ ಮಾಡಿದ ನರಸಿಂಹನಾಯಕರು, ಯೋಚಿಸುತ್ತ

"ಜನತೆಯ ಅಭಿಮತವೇ ಜನಾರ್ದನನ ಅಭಿಮತ. ನಿಮ್ಮೆಲ್ಲರ ಇಚ್ಛೆಯಿದ್ದಂತಾಗಲಿ" ಎಂದರು.

ನಾಯಕರು ಆನಂದಪರವಶರಾಗಿ.

**"ಶ್ರೀ ಪೃಥ್ವೀವಲ್ಲಭ, ಮಹಾಮಂಡಲೇಶ್ವರ, ಮೋಹನ ಮುರಾರಿ, ಹಿಂದೂರಾಯ ಸುರತ್ರಾಣ, ಶ್ರೀ ಶ್ರೀಪಾದರಾಜ ಪಾದ ಭೃಂಗ, ಕರ್ನಾಟಕ ವಿದ್ಯಾವಿಲಾಸ, ಭಾಷೆಗೆ ತಪ್ಪುವ ರಾಯರ ಗಂಡ, ಪೂರ್ವ – ಪಶ್ಚಿಮ – ದಕ್ಷಿಣ ಸಮುದ್ರಾಧಿಪತಿ, ಅರಿರಾಯ ವಿಭಾಡ, ಕಠಾರಿ ಸಾಳುವ ಶ್ರೀ ವೀರನರಸಿಂಹರಾಯರಿಗೆ ವಿಜಯವಾಗಲಿ."**

ಎಂದು ದಿಗಂತ ಮುಟ್ಟುವಂತೆ ಘೋಷಿಸಿದರು.

# ೨೧

ಸೈನ್ಯಸಮೇತ ಆನೆಗೊಂದಿಗೆ ಬಂದು ಕುಳಿತು ನರಸಿಂಹನಾಯಕರು, ಅರವೀಟಿ ಬುಕ್ಕನಾಯಕರೊಂದಿಗೆ ವಿರೂಪಾಕ್ಷರಾಯರಿಗೆ ಹೇಳಿಕಳಿಸಿದರು.

ತಿರುಮಲೆ ನಾಯಕರೊಂದಿಗೆ ವಿಜಯನಗರ ಪ್ರವೇಶಿಸಿದ ಅರವೀಟಿ ಬುಕ್ಕನಾಯಕರು, ಸೆರೆಯಲ್ಲಿದ್ದ ವಿಠ್ಠರಸ ಒಡೆಯರನ್ನೂ, ಕುಚೇಲನಾಯಕರನ್ನೂ ಜತೆಯಲ್ಲಿ ಕರೆದುಕೊಂಡು ವಿರೂಪಾಕ್ಷರಾಯರನ್ನು ಕಾಣಲು ಹೋದರು.

ದಣ್ಣಾಯಕರನ್ನು ಕಂಡ ದ್ವಾರಪಾಲಕರು ದೂರ ಸರಿದು ನಿಂತರು.

ನೇರವಾಗಿ ತಮ್ಮ ಶಯ್ಯಾಗೃಹ ಪ್ರವೇಶಿಸಿದ ನಾಯಕರನ್ನು ಕಂಡು, ವಿರೂಪಾಕ್ಷರಾಯರು ನಲ್ಲೆಯರ ತೋಳತೆಕ್ಕೆ ಬಿಡಿಸಿಕೊಂಡು ದಿಗ್ಗನೆದ್ದು ಪಕ್ಕದಲ್ಲಿದ್ದ ಕತ್ತಿಯನ್ನು ಒರೆಗಳಚಿ,

" ನಮ್ಮ ಅಪ್ಪಣೆಯಿಲ್ಲದೆ ಒಳಗೆ ಏತಕ್ಕೆ ಬಂದಿರಿ ?"

ಎಂದು ಗದರಿದರು.

" ನಿಮ್ಮ ಅಪ್ಪಣೆ – ನೀವು ಯಾರು ?"

" ವಿಜಯನಗರ ಸಾಮ್ರಾಜ್ಯಾಧೀಶರಾದ ಶ್ರೀ ವಿರೂಪಾಕ್ಷರಾಯರು!"

ಬುಕ್ಕನಾಯಕರು ಗಹಗಹಿಸಿ ನಗುತ್ತಾ

"ನೋಡಿದಿರಾ ತಿರುಮಲನಾಯಕರೇ – ಕಂಠಪೂರ್ತಿ ಸುರೆ ಕುಡಿದು, ವಾರಾಂಗನೆಯರ ತೊಳತೆಕ್ಕೆಯಲ್ಲಿ ನಲಿದಾಡುತ್ತಿರುವ ಈ ಲಂಪಟ ನಮ್ಮ ಸಾಮ್ರಾಜ್ಯಾಧೀಶನಂತೆ !"

ಎನ್ನಲು ಕುಪಿತರಾದ ವಿರೂಪಾಕ್ಷರಾಯರು, ನಾಯಕರತ್ತ ಬಲವಾಗಿ ಕತ್ತಿ ಬೀಸಿದರು. ಅವರು ಕತ್ತಿ ಪ್ರಯೋಗಿಸಬಹುದೆಂದು ನಿರೀಕ್ಷಿಸಿದ್ದ ಬುಕ್ಕನಾಯಕರು, ಪಕ್ಕಕ್ಕೆ ಸರಿದು ಪೆಟ್ಟು ತಪ್ಪಿಸಿಕೊಳ್ಳಲು, ಬುಕ್ಕನಾಯಕರು, ವಿಠ್ಠರಸ ಒಡೆಯರು, ಪ್ರಭುಗಳನ್ನು ಹಿಡಿದುಕೊಂಡು, ಅವರ ಕೈಯಿಂದ ಕತ್ತಿ ಕಸುಗೊಂಡರು.

ಹಲ್ಲು ಕಳಚಿದ ಹಾವಿನಂತೆ ಬುಸುಗುಟ್ಟುತ್ತಾ ವಿರೂಪಾಕ್ಷರಾಯರು,

" ನಾಯಿಗಳಿರಾ – ನಮ್ಮ ದೇಹ ಮುಟ್ಟುವಷ್ಟು ಧೈರ್ಯ ಬಂದಿತೇ ನಿಮಗೆ ?"

ಎಂದು

" ಯಾರಲ್ಲಿ – ಯಾರಲ್ಲಿ – ಯಾರಲ್ಲಿ "

ಎಂದು ಅರಚಿದರು.

ಹೊರಗಿನಿಂದ ಪ್ರತಿಧ್ವನಿ ಬರದಿರಲು ತಾವೇ ಹೊರಗೆ ಹೋಗಲೆತ್ನಿಸಲು, ನಾಯಕರು ಅಡ್ಡಗಟ್ಟಿ,

" ನೀವು ಹೊರಗೆ ಹೋಗುವಂತಿಲ್ಲ " ಎಂದರು.

" ಏಕೆ ?"

" ನೀವು ಬಂದಿಗಳು !"

" ಯಾರ ಬಂದಿ ?"

" ನಮ್ಮ ಪ್ರಭುಗಳ ಬಂದಿ "

" ನಿಮ್ಮ ಪ್ರಭುಗಳು – ಅವರು ಯಾರು ?

" ಕೇಳಿ "

ಎಂದು ಬುಕ್ಕನಾಯಕರು, ಕೈಚೀಲದಿಂದ ನರಸಿಂಹನಾಯಕರ ನಿರೂಪ ತೆಗೆದು ಓದಲಾರಂಭಿಸಿದರು.

" ವಿಜಯನಗರ ಸಾಮ್ರಾಜ್ಯಾಧೀಶರಾಗಿರುವ ಶ್ರೀಶ್ರೀ ವಿರೂಪಾಕ್ಷ ರಾಯರ ಸ.ಕ್ಕೆ. ಚಂದ್ರಗಿರಿಯ ಪ್ರಭುಗಳಾದ ಪ್ರೌಢಪ್ರತಾಪಿ, ಶ್ರೀ ಪೃಥ್ವಿವಲ್ಲಭ, ಮಹಾಮಂಡಲೇಶ್ವರ ಇತ್ಯಾದಿ ಬಿರುದಾಂಕಿತರಾದ ಕಠಾರಿ ಶ್ರೀ ಸಾಳುವ ನರಸಿಂಹನಾಯಕರು ಸ್ವಹಸ್ತದಿಂದ ಬರೆದು ಕಳಿಸಿರುವ ನಿರೂಪ :

ಮಹರ್ಷಿ ಶ್ರೀ ವಿದ್ಯಾರಣ್ಯರ ತಪಃಪ್ರಭಾವದಿಂದಲೂ, ಶ್ರೀ ಹರಿಹರ ರಾಯರು, ಶ್ರೀ ಬುಕ್ಕರಾಯರ ಪ್ರೌಢಪ್ರತಾಪದಿಂದಲೂ ನಿರ್ಮಿತವಾದ ವಿಜಯನಗರ ಮಹಾಸಾಮ್ರಾಜ್ಯ ದೈವವಶಾತ್ ನಿಮ್ಮ ಹಸ್ತಗತವಾಯಿತು. ನೀವು ಸಿಂಹಾಸನದ ಮೇಲೆ ಕೂಡುವುದಕ್ಕೆ ನಾವು ಕಾರಣರೆಂಬುದು ನಿಮ್ಮ ನೆನಪಿನಲ್ಲಿರಬಹುದು.

ಈ ಹತ್ತೊಂಭತ್ತು ವರ್ಷಗಳು ನೀವು ನಡೆಸಿರುವ ಆಡಳಿತ, ಜೀವನ ಎರಡನ್ನೂ ನಾವು ನೋಡಿದ್ದೇವೆ. ಸಾಮ್ರಾಜ್ಯವನ್ನು ಅನಾಯಕ ಮಾಡಿ, ಹಿರಿಯರು ಗಳಿಸಿದ್ದ ಪ್ರಾಂತ್ಯಗಳನ್ನೆಲ್ಲಾ ಬಹಮನಿಯವರಿಗೆ ಬಿಟ್ಟು ಕೊಟ್ಟು, ನೀವು ನಿರ್ಲಜ್ಜ ವಿಷಯಾಭಿಲಾಷಿಗಳಾಗಿ, ಸಮಸ್ತ ಪ್ರಜರ ನಂಬಿಕೆ, ಗೌರವಗಳನ್ನು ಕಳೆದುಕೊಂಡಿದ್ದೀರಿ.

ಗೋವೆಯನ್ನು ಪುನರಾರ್ಜಿಸಬೇಕೆಂದು ನಾವು ದಂಡೆತ್ತಿ ಹೊರಟಾಗ, ನೀವು ಸೈನ್ಯ ಸಹಾಯ ಕಳಿಸದೆ, ಬಹಮನಿಯವರಿಗೆ ನಾವು ಬಲಿಯಾಗಲೆಂದು ಹಾರೈಸಿದಿರಿ.

ನಿಮ್ಮ ಕೈಯಲ್ಲಿ ರಾಜ್ಯವನ್ನು ಬಿಡುವುದು ಸಾಮ್ರಾಜ್ಯದ ಅಸ್ತಿತ್ವಕ್ಕೂ, ಹಿಂದೂ ಧರ್ಮೋತ್ಕ್ರಾಂತಿಗೂ ಅಪಾಯಕಾರಿಯೆಂದು, ನಮಗೆ ಖಚಿತವಾಗಿರುವುದರಿಂದ, ಸಾಮ್ರಾಜ್ಯ ಸಿಂಹಾಸನದಿಂದ ನಿಮ್ಮನ್ನಿಳಿಸಿ, ಸಮಸ್ತ ಪ್ರಜರ ಕೋರಿಕೆಯಂತೆ ನಾವೇ ಸಿಂಹಾಸನವನ್ನೇರಲು ನಿರ್ಧರಿಸಿದ್ದೇವೆ.

ಈ ನಿರೂಪ ಕೈಸೇರಿದ ಇಪ್ಪತ್ತುನಾಲ್ಕು ಗಂಟೆಗಳ ಅವಧಿಯೊಳಗೆ ನೀವು ವಿಜಯನಗರದ ಗಡಿ ದಾಟಿರಬೇಕು. ನಿಮ್ಮ ಜೀವನ ಸಾಗಿಸಲು ಎಷ್ಟು ಅಗತ್ಯವೋ ಅಷ್ಟು ಹೊನ್ನನ್ನು ನೀವು ಒಯ್ಯಬಹುದು. ನಿಮ್ಮ ಪ್ರಾಣಕ್ಕೂ ಸ್ವಲ್ಪವೂ ಧಕ್ಕೆ ಬಾರದಂತೆ ಗಡಿ ದಾಟಿಸುವ ಜವಾಬುದಾರಿಯನ್ನು ನಾವು ಶ್ರೀ ಅರವೀಟಿ ಬುಕ್ಕನಾಯಕರಿಗೆ ವಹಿಸಿದ್ದೇವೆ.

ಸಾಮ್ರಾಜ್ಯದ ವಿರುದ್ಧ ನೀವು ಎಲ್ಲಿಯಾದರೂ ಬಂಡಾಯವೆಬ್ಬಿಸಿದರೆ, ಘೋರ ಶಿಕ್ಷೆಗೆ ಗುರಿಯಾಗುತ್ತೀರೆಂದು ಈಗಲೇ ಎಚ್ಚರ ಕೊಡಲಾಗಿದೆ."

ವಿರೂಪಾಕ್ಷರಾಯರ ಅಮಲು ನಿಶ್ಶೇಷವಾಗಿ ಇಳಿದು ಹೋಯಿತು. ಅವರೆದ್ದು ನಿಂತು, ಕೈಜೋಡಿಸಿ,

"ದಯೆಯಿಟ್ಟು ವಿಜಯನಗರದಿಂದ ನಮ್ಮನ್ನು ಕಳಿಸಬೇಡಿ. ನಿಮ್ಮೆಲ್ಲರ ಇಷ್ಟದಂತೆ ಇನ್ನು ಮುಂದೆ ರಾಜ್ಯಭಾರ ಮಾಡುತ್ತೇವೆ. ಈವರೆಗೆ ನಾವು ಮಾಡಿರುವ ಅಪರಾಧಗಳನ್ನು ಮನ್ನಿಸಿ " ಎಂದರು.

ಅವರ ದೈನ್ಯಾವಸ್ಥೆ ಕಂಡು ಕೆರಳಿದ ವಿಠ್ಠರಸ ಒಡೆಯರು,

" ಸಾಮ್ರಾಜ್ಯಾಧೀಶರಾಗಿದ್ದರೂ ಅಲ್ಪರಂತೆ ಬಾಳ್ವೆ ಮಾಡಿದಿರಿ. ಈಗಲಾದರೂ ಧೀರರಂತೆ ಪರಿಸ್ಥಿತಿಯನ್ನೆದುರಿಸಿ – ಸಾಮ್ರಾಜ್ಯದ ಒಂದು ಹುಲು

ಪ್ರಾಣಿಯೂ ನಿಮ್ಮನ್ನು ಗೌರವಿಸುವುದಿಲ್ಲ. ಶ್ರೀಶ್ರೀ ಸಾಳುವ ನರಸಿಂಹ ನಾಯಕರು ನಿಮ್ಮ ವಿಷಯದಲ್ಲಿ ದೈವಿಕ ಔದಾರ್ಯ ತೋರಿದ್ದಾರೆ. ನಿಮಗೆಷ್ಟು ಬೇಕೋ ಅಷ್ಟು ಸಂಪತ್ತನ್ನು ತೆಗೆದುಕೊಂಡು ಮೊದಲು ವಿಜಯ ನಗರ ಬಿಟ್ಟು ಹೊರಡಿ " ಎಂದರು.

ವಿರೂಪಾಕ್ಷರಾಯರು ಮಂತ್ರಮುಗ್ಧರಂತೆ ಕುಳಿತುಬಿಟ್ಟರು.

ನಾಯಕರೇ ಗಂಟುಮೂಟೆ ಕಟ್ಟಿ, ಒಂದು ಮೇನೆ ತರಿಸಿ, ಅದರ ತುಂಬ ಅನರ್ಘ್ಯ ರತ್ನಾಭರಣಗಳನ್ನು ತುಂಬಿ, ವಿರೂಪಾಕ್ಷರಾಯರ ಕೈಹಿಡಿದು ಕರೆದೊಯ್ದು ಮೇನೆಯೊಳಗೆ ಕೂಡಿಸಿ, ಗಡಿಯಾಚೆ ಕರೆದೊಯ್ದು ಬಿಟ್ಟು ಬಂದರು.

ವಿರೂಪಾಕ್ಷರಾಯರ ನಿಷ್ಕ್ರಮಣದ ಸುದ್ದಿ ತಿಳಿದೊಡನೆಯೇ ನಾಗರಿಕರು ಹರ್ಷದಿಂದ ಕುಣಿದಾಡಿ, ಮಹಾವೀರ ನರಸಿಂಹನಾಯಕರನ್ನು ಸ್ವಾಗತಿಸಲು ಸಜ್ಜಾದರು.

ಮಾರನೆಯ ದಿನ ರಾಜಧಾನಿಯ ಸಕಲ ರಾಜಮರ್ಯಾದೆಗಳಿಂದ ಆನೆಗೊಂದಿಗೆ ಹೋದ ನಾಯಕರು, ನೂತನ ಪ್ರಭುಗಳನ್ನು ವೈಭವೋಪೇತರಾಗಿ ರಾಜಧಾನಿಗೆ ಕರೆತಂದರು.

## ೨೨

ರಾಜ್ಯಾಧಿಕಾರ ವಹಿಸಿಕೊಂಡು **ನರಸಿಂಹನಾಯಕರು ನರಸಿಂಹ ರಾಯರಾದರು.**

ರಾಯರ ಪತ್ನಿ ಶ್ರೀರಂಗಮಾಂಬಾ, ಪುತ್ರಿ, ಸಖೀಜನ, ಪರಿವಾರ ದೊಂದಿಗೆ ವಿಜಯನಗರಕ್ಕೆ ಆಗಮಿಸಿದರು.

ರಾಜ್ಯಾಧಿಕಾರ ವಹಿಸಿಕೊಂಡು ಒಂದು ತಿಂಗಳಾದರೂ ಪ್ರಭುಗಳು ಪಟ್ಟಾಭಿಷೇಕದ ಸುದ್ದಿಯನ್ನೇ ಎತ್ತಲಿಲ್ಲ.

ಅವರ ಮನೋಗತವನ್ನರಿಯದೆ ಯೋಚನಾಕ್ರಾಂತರಾದ ಬುಕ್ಕ ನಾಯಕರು.

" ಪಟ್ಟಾಭಿಷೇಕ ಇನ್ನು ಮುಂದೆ ದೂಡುವುದು ವಿಹಿತವಲ್ಲ. ಪ್ರಜಾ ಜನರು ನಿರಾಶರಾಗುತ್ತಾರೆ. ತಮ್ಮ ಅನುಕೂಲ ಸೂಚಿಸಿದರೆ ನಾವು ಮುಂದಿನ ವ್ಯವಸ್ಥೆ ಆರಂಭಿಸುತ್ತೇವೆ."

" ಕುಚೇಲ ನಾಯಕರು ಬರಲಿ – ಸುಮ್ಮನಿರಿ."

" ಅವರು ಎಲ್ಲಿಗೆ ಹೋಗಿದ್ದಾರೆ ?"

" ಅದನ್ನು ರಹಸ್ಯವಾಗಿಡಬೇಕೆಂದು ಅಪೇಕ್ಷೆಯಿತ್ತು. ನೀವು ಒತ್ತಿ ಯೊತ್ತಿ ಕೇಳುತ್ತಿರುವುದರಿಂದ ಹೇಳಬೇಕಾಗಿದೆ."

" ತಮ್ಮ ಮನಸ್ಸಿಗೆ ನೋವಾಗುವುದಾದರೆ ನಾನು ಒತ್ತಾಯ ಪಡಿಸುವುದಿಲ್ಲ."

" ಅಂಥಹದೇನೂ ಇಲ್ಲ ನಾಯಕರೇ – ಚಂದ್ರಗಿರಿಗೆ ನಮ್ಮ ಗುರುನಾಥ ಶ್ರೀಶ್ರೀಪಾದರಾಜರು ದಯೆಮಾಡಿಸಿದಾಗ ನಾವು ನಮ್ಮ ರಾಜ್ಯವನ್ನು ಅವರ ಶ್ರೀಚರಣಗಳಿಗೆ ಅರ್ಪಿಸಿಬಿಟ್ಟೆವು. ಈ ಮಹಾಸಾಮ್ರಾಜ್ಯ ಅವರದು – ಅವರು ದಯೆಮಾಡಿಸಿ, ಸಿಂಹಾಸನಾರೋಹಣ ಮಾಡಿ, ನಮಗೆ ಅದನ್ನು ಅನುಗ್ರಹಿಸಿದರೆ ಅದು ನಮ್ಮದಾಗುತ್ತದೆ. ಶ್ರೀಗುರುನಾಥರ ಆಗಮನ ನಿರೀಕ್ಷಿಸುತ್ತಿದ್ದೇವೆ."

ಮಹಾಪ್ರಭುಗಳ ಆತ್ಮಾರ್ಪಣಭಾವವನ್ನು ಕಂಡು ಆನಂದಿಸಿದ ಬುಕ್ಕ ನಾಯಕರು,

"ತ್ಯಾಗ, ವೈರಾಗ್ಯ, ದೀನಜನಪ್ರೇಮ, ಭಗವದ್ಭಕ್ತಿ, ಗುರು ಭಕ್ತಿಯುಳ್ಳವರಿಗೆ ಮಾತ್ರ ವಿಜಯನಗರದ ಸಿಂಹಾಸನ ದಕ್ಕುತ್ತದೆ, ಭೋಗ ಪ್ರಿಯರೂ, ಪ್ರಜಾಪೀಡಕರೂ, ನಾಸ್ತಿಕರೂ, ಗುರುದ್ರೋಹಿಗಳೂ ಇಲ್ಲಿ ಊರ್ಜಿತರಾಗುವುದಿಲ್ಲ ಎಂದು ಹಿರಿಯರು ಹೇಳುತ್ತಿದ್ದ ಮಾತು ನೆನಪಿಗೆ ಬರುತ್ತದೆ ಮಹಾಪ್ರಭೂ. ತಮ್ಮಿಂದ ವಿಜಯನಗರದಲ್ಲಿ ಹೊಸ ಮನೆತನದ ಆಳ್ವಿಕೆ ಆರಂಭವಾಗಿರುವಂತೆ, ಹೊಸ ಶಕವೂ ಆರಂಭವಾಗುತ್ತದೆ. ನೀವು ಶಕಪುರುಷರು – ನಿಮ್ಮ ಸಮಕಾಲೀನರಾಗಿ, ನಿಮ್ಮ ಸೇವೆ ಮಾಡುವ ಅವಕಾಶ ಸಿಕ್ಕಿದುದು ನನ್ನ ಪುಣ್ಯ ವಿಶೇಷ."

ಬುಕ್ಕನಾಯಕರನ್ನು ಹಾರ್ದಿಕವಾಗಿ ಅಪ್ಪಿಕೊಂಡ ಮಹಾಪ್ರಭುಗಳು,

"ಜತೆಯಲ್ಲಿ ನಾವು ಬೇಕಾದಷ್ಟು ಕಷ್ಟನಷ್ಟಗಳನ್ನನುಭವಿಸಿದ್ದೇವೆ. ಹಾಗೆಯೇ ಸುಖದಲ್ಲಿಯೂ ನಾವು ಒಂದಾಗಿರೋಣ – ನಿದ್ರಾಹಾರಗಳನ್ನು ತೊರೆದು ಈ ಮಹಾಸಾಮ್ರಾಜ್ಯದ ಮಹೋನ್ನತಿ ಆಚಂದ್ರಾರ್ಕವಾಗಿ ಉಳಿಯುವಂತೆ ಶ್ರಮಿಸೋಣ" ಎಂದರು,

ಬಿದಿಗೆಯ ಶುಭದಿನ ಕುಚೇಲನಾಯಕರೊಂದಿಗೆ ಶ್ರೀಗುರು ಶ್ರೀಪಾದ ರಾಜರು, ಪ್ರಿಯಶಿಷ್ಯ ಯತಿರಾಜ ಮತ್ತು ಪರಿವಾರ ಸಮೇತರಾಗಿ ರಾಜ ಧಾನಿಗೆ ಆಗಮಿಸಿದರು.

ಮಹಾಪ್ರಭುಗಳು, ಮಂತ್ರಿಗಳು, ದಣ್ಣಾಯಕರು ಪುರದ ಹೆಬ್ಬಾಗಿಲಿ ನಲ್ಲಿಯೇ ಅವರನ್ನು ಸ್ವಾಗತಿಸಿ, ಸಕಲ ರಾಜಮರ್ಯಾದೆಯೊಂದಿಗೆ ಕರೆ ತಂದರು.

ಶಿಷ್ಯನ ಅಭಿಮತವನ್ನರಿತ ಗುರುಗಳು ಆನಂದತುಂದಿಲರಾಗಿ,

"ಮೂರುವರೆ ಘಳಿಗೆ ನಾವು ಸಿಂಹಾಸನಾರೋಹಣ ಮಾಡುತ್ತೇವೆ. ತರುವಾಯ ನೀವು ಅದನ್ನು ಒಪ್ಪಿಸಿಕೊಂಡು, ಧರ್ಮಮಾರ್ಗದಲ್ಲಿ ರಾಜ್ಯಾಡಳಿತ ನಡಸಿ ಸಕಲರಿಗೂ ಕ್ಷೇಮವನ್ನುಂಟುಮಾಡಬೇಕು" ಎಂದರು.

ಮಹಾಪ್ರಭುಗಳು 'ಹಸಾಜ'ವೆಂದರು.

ಪಟ್ಟಾಭಿಷೇಕದ ಸಕಲ ಸಿದ್ಧತೆಗಳೂ ಶರವೇಗದಲ್ಲಿ ನಡೆದವು.

ನವಮಿ ಲಗ್ನದಲ್ಲಿ ಗುರುಸ್ವಾಮಿ ಶ್ರೀ ಶ್ರೀಪಾದರಾಜರು, ಸಾಮ್ರಾಜ್ಯ ಸಿಂಹಾಸನವನ್ನೇರಿ, ಮೂರುವರೆ ಘಳಿಗೆ ಸಕಲ ಪ್ರಜರಿಗೂ ಕಣ್ಮನಗಳಿಗೆ ಹಬ್ಬವನ್ನಂಟುಮಾಡಿ, ಶ್ರೀ ವೀರನರಸಿಂಹರಾಯರನ್ನು ಸಿಂಹಾಸನದ ಮೇಲೆ ಕೂಡಿಸಿ ಸ್ವಹಸ್ತದಿಂದ, ಅವರ ತಲೆಯ ಮೇಲೆ ರಾಜಮುಕುಟವನ್ನಿಟ್ಟರು.

ಪ್ರಜಾಸಮಸ್ತರು ಏಕ ಕಂಠರಾಗಿ

" ಸಾಳುವ ಶ್ರೀ ನರಸಿಂಹರಾಯರಿಗೆ ಜಯವಾಗಲಿ."

" ಮಹಾಗುರು ಶ್ರೀ ವಿದ್ಯಾರಣ್ಯರಿಗೆ ಜಯವಾಗಲಿ."

" ರಾಜಗುರು ಶ್ರೀ ಶ್ರೀಪಾದರಾಜರಿಗೆ ಜಯವಾಗಲಿ."

ಎಂದು ಉದ್ಘೋಷಿಸಿದರು.

ಪಟ್ಟಾಭಿಷೇಕ ಮಹೋತ್ಸವಕ್ಕೆ ಸಂಬಂಧಿಸಿದ ಉತ್ಸವಾದಿಗಳು ಮುಗಿಯುವವರೆಗೆ ರಾಜಧಾನಿಯಲ್ಲಿದ್ದ ಶ್ರೀ ಶ್ರೀಪಾದರಾಜರು, ಸ್ವಗ್ರಾಮಕ್ಕೆ ಪ್ರಯಾಣ ಬೆಳಸಿದರು.

ಶ್ರೀಪಾದರಾಜರು, ಮುಳುಬಾಗಿಲು ಸೇರಿದೊಡನೆಯೇ ಶ್ರೀ ಬ್ರಹ್ಮಣ್ಯ ತೀರ್ಥರಿಂದ ಬಂದಿದ್ದ ಶ್ರೀಮುಖ ನೋಡಿ, ಯತಿರಾಜನನ್ನು ಹತ್ತಿರ ಕರೆದು,

" ನಿನ್ನ ಪರಮಗುರುಗಳು ಶ್ರೀ ಬ್ರಹ್ಮಣ್ಯತೀರ್ಥಯತಿಗಳು ನಿನ್ನ ಬರಮಾಡಿದ್ದಾರೆ – ಹೋಗಿ ಬಾ ಯತಿರಾಜ " ಎಂದರು.

ತಮ್ಮಲ್ಲಿಗೆ ಬಂದ ಶಿಷ್ಯ ಯತಿರಾಜನನ್ನು ಪರಮಾದರದಿಂದ ಸ್ವಾಗತಿಸಿದ ಬ್ರಹ್ಮಣ್ಯತೀರ್ಥರು, ಅವನನ್ನು ಚೆನ್ನಾಗಿ ಪರೀಕ್ಷಿಸಿ, ಅವನಿಂದ ನಡೆಸ ಬೇಕಾದ ಆತ್ಮಶ್ರಾದ್ಧಾದಿಗಳನ್ನು ಮಾಡಿಸಿ, ಅವನಿಗೆ ' **ವ್ಯಾಸತೀರ್ಥ** ' ಎಂದು ನಾಮಕರಣಮಾಡಿ ಸನ್ಯಾಸಾಶ್ರಮವನ್ನು ಅನುಗ್ರಹಿಸಿದರು.

ಕೆಲವು ದಿನ ವ್ಯಾಸತೀರ್ಥರನ್ನು ತಮ್ಮ ಬಳಿಯಲ್ಲಿಯೇ ಇಟ್ಟುಕೊಂಡ ಬ್ರ

" ಶ್ರೀ ವ್ಯಾಸತೀರ್ಥರೇ – ನಿಮ್ಮ ಶಿಕ್ಷಣ ಇನ್ನೂ ಪೂರ್ಣವಾಗ ಬೇಕಾಗಿದೆ. ನೀವು ಮುಳುಬಾಗಿಲಿಗೇ ಹೋಗಿ ಶ್ರೀಶ್ರೀಪಾದರಾಜರಲ್ಲಿ ವಿದ್ಯಾಭ್ಯಾಸ ಮುಂದುವರಿಸಿ."

ಎಂದು ಆಶೀರ್ವದಿಸಿ ಮುಳುಬಾಗಿಲಿಗೆ ಶಿಷ್ಯರನ್ನು ಕಳುಹಿಸಿ ಕೊಟ್ಟರು.

# ೧೩

ಮಹಮದ್ ಗವಾನನ ನಿಧನಾನಂತರ ಬಹಮನಿ ರಾಜ್ಯ ಅನಾಥ ವಾಯಿತು. ಗವಾನನಿಗೆ ಅಂಜಿ, ಅಡಗಿ ಕುಳಿತಿದ್ದ ಸ್ವಾರ್ಥಿಗಳು, ಅಗ್ನಿ ಭಕ್ಷಕರು, ಸಾಮಂತರು ಈ ಸಂಧಿಸಾಧಿಸಿ ಸ್ವತಂತ್ರರಾಗಲು ಹವಣಿಸಿದರು.

ಗವಾನ್ ಗತಿಸಿದ ಒಂದೇ ವರ್ಷದಲ್ಲಿ ಸುಲ್ತಾನ್ ಮಹಮದ್ ಕಾಲ ವಶನಾಗಲು ಅವನ ಮಗ ಮುಮ್ಮಡಿ ಮಹಮದ್ ಗಾದಿಯೇರಿದ.

ಬಹಮನಿ ರಾಜ್ಯದಲ್ಲಿ ಹಲವು ಬಣಗಳಿದ್ದವು. ದಖಿನಿ ಅಥವಾ ದೇಶೀ ಯರ ಬಣ, ಅಫ್ರಿಕನ್ನರು, ಪರ್ಶಿಯಾದವರು, ಅರೇಬಿಯಾದವರು, ತುರುಕರ ವಿದೇಶೀ ಬಣ. ಇವರಲ್ಲದೆ ಆಫ್ರಿಕನ್ ತಂದೆ, ದೇಶೀಯ ತಾಯಿಗೆ ಜನಿಸಿದ 'ಮೂವಾಲರ' ಬಣ. ಈ ಮೂರು ಬಣಗಳಿಗೂ ಸತತ ಕಲಹ ವಾರಂಭವಾಯಿತು. ದಖನಿಗಳು ಸುನ್ನಿಗಳಾಗಿದ್ದರು; ವಿದೇಶೀಯರು ಷಿಯಾಗಳಾಗಿದ್ದರು. ಸುನ್ನಿ – ಷಿಯಾ ಜಗಳವೂ ಬಹಮನಿ ರಾಜ್ಯದ ಬಿಕ್ಕಟ್ಟನ್ನು ಸಡಲಿಸಲು ಕಾರಣವಾಯಿತು.

ಬಹಮನಿಯ ಐವರು ಪ್ರಬಲ ಸಾಮಂತರು ಸ್ವತಂತ್ರರಾಗಿ, ತಮ್ಮದೇ ರಾಜ್ಯಗಳನ್ನು ಸ್ಥಾಪಿಸಿದರು. – ಬಿರಾರಿನ ಇಮಾದ್‌ಶಾಹಿ ವಂಶ; ಅಹಮದ್ ನಗರದ ನಿಜಾಂಶಾಹಿ ವಂಶ; ವಿಜಾಪುರದ ಆದಿಲ್‌ಶಾಹಿ ವಂಶ; ಗೋಲ್ಕೊಂಡದ ಕುತುಬ್‌ಶಾಹಿ ವಂಶ; ಬಿದರೆಯ ಬರೀದ್‌ಶಾಹಿ ವಂಶ.

ಬಿರಾರಿನ ಫತುಲ್ಲಾ ಇಮಾದ್‌ಶಹ ಮೊಟ್ಟಮೊದಲು ಬಹಮನಿಯ ಹಿಡಿತದಿಂದ ಪಾರಾಗಿ ತನ್ನ ಇಮಾದ್‌ಶಾಹಿ ವಂಶವನ್ನು ಸ್ಥಾಪಿಸಿದ.

ವಿಜಾಪುರದ ರಾಜಪ್ರತಿನಿಧಿಯಾದ ಯೂಸಫ್ ಆದಿಲ್‌ಖಾನ್ ಎರಡನೆಯವನು. ಗುಲಾಮನಾಗಿದ್ದ ಇವನನ್ನು ಮಹಮದ್ ಗವಾನ್ ಕೊಂಡು, ಮುಂದಕ್ಕೆ ತಂದಿದ್ದ. ಷಿಯಾ ಪಂಥಕ್ಕೆ ಸೇರಿದ್ದ ಯೂಸುಫ್ ಕಟ್ಟುಧರ್ಮಿಯಾಗಿರಲಿಲ್ಲ. ವಿದ್ಯಾಭಿಮಾನಿಯಾದ ಯೂಸಫ್, ಪರ್ಶಿಯಾ, ತುರ್ಕಿಸ್ಥಾನ, ರೋಮ್ ಮತ್ತಿತರ ದೇಶಗಳಿಂದ ವಿದ್ವಾಂಸರನ್ನೂ,

ಕಲಾವಿದರನ್ನೂ ಬರಮಾಡಿಕೊಂಡು ಗೌರವಿಸುತ್ತಿದ್ದ.

ಗವಾನನಂತರ ಬಹಮನಿರಾಜ್ಯದ ಮುಖ್ಯ ವಜೀರನಾದ ಮಲ್ಲಿಕ್ ಅಹಮದನೇ ಅಹಮದ್ ನಗರರಾಜ್ಯ ಸ್ಥಾಪಕ. ಜುನ್ನಾರಿಗೆ ರಾಜಪ್ರತಿನಿಧಿಯಾಗಿ ನೇಮಿಸಲ್ಪಟ್ಟ ಮಲ್ಲಿಕ್, ಸ್ವತಂತ್ರನಾಗಿ ರಾಜ್ಯಸ್ಥಾಪಿಸಿ, ಅಹಮದ್ ನಗರವನ್ನು ತನ್ನ ರಾಜಧಾನಿ ಮಾಡಿಕೊಂಡ.

ಗೋಲ್ಕೊಂಡದ ಮುಸ್ಲಿಮ್‌ರಾಜ್ಯ, ಓರುಗಲ್ಲಿನ ಹಿಂದೂರಾಜ್ಯದ ಅವಶೇಷಗಳ ಮೇಲೆ ಸ್ಥಾಪಿತವಾಯಿತು. ಕುತುಬ್‌ಶಾಹಿ ವಂಶಸ್ಥಾಪಕ ಕಾಲಿಷಹ, ಬಹಮನಿರಾಜ್ಯದ ಅಧಿಕಾರಿಯಾಗಿದ್ದ. ಇವನ ಅಭ್ಯುದಯಕ್ಕೂ ಮಹಮದ್ ಗವಾನ್ ಕಾರಣ. ತೆಲುಂಗಾಣದ ರಾಜ ಪ್ರತಿನಿಧಿಯಾಗಿದ್ದ ಕಾಲಿಷಹ, ಬಿದರೆ ಬರೀದನ ಔದ್ಧತ್ಯಕ್ಕೆ ಸಿಡಿಮಿಡಿಗೊಂಡು, ಸ್ವತಂತ್ರನಾದ.

ಬಹಮನಿರಾಜ್ಯ ಒಡೆದು ಛಿನ್ನಭಿನ್ನವಾಗುತ್ತಿರಲು ಬಿದರೆಯ ರಾಜ್ಯ ಪ್ರತಿನಿಧಿಯಾಗಿದ್ದ ಅಮೀರ್ ಆಲಿ ಬರೀದ್ ಸ್ವತಂತ್ರನಾದ.

ಈ ಐವರಲ್ಲಿ ದ್ವೇಷಾಸೂಯೆ, ಜಗಳ ಸತತವಾಗಿ ಮೂಡಿತ್ತು. ಒಬ್ಬರನ್ನು ಹತ್ತಿಕ್ಕಿ ಮತ್ತೊಬ್ಬರು ಪ್ರಾಬಲ್ಯ ಬೆಳಸಲು ಹವಣಿಸುತ್ತಿದ್ದರು. ಅವರ ಸುನ್ನಿ – ಷಿಯಾ ವಿಭೇದವೂ ವೈಮನಸ್ಯಕ್ಕೆ ಪುಟಗೊಟ್ಟಿತ್ತು.

ಅಮೀರ್ ಆಲಿ ಬರೀದನ ತರುವಾಯ ಬಿದರೆಯ ಗಾದಿಯೇರಿದ ಅವನ ಮಗ ಕಾಸಿಂ ಬರೀದ್, ಯೂಸಫ್ ಆದಿಲ್‌ಷಹನ ಮೇಲೆ ಬದ್ಧದ್ವೇಷ ತಳೆದಿದ್ದ. ಆಶಾವಿಷ್ಟನಾದ ಆದಿಲ್‌ಷಹನನ್ನು ಮುರಿಯದಿದ್ದರೆ ಬಿದರೆ ಉಳಿಯುವುದು ಕಷ್ಟವೆಂದು ಮನಗಂಡ ಕಾಸಿಂ, ತನ್ನ ಆಪ್ತಮಿತ್ರ ಇಸ್ಮಾಯಿಲನನ್ನು ವಿಜಯನಗರದ ನೆರವು ಕೇಳಲು ಕಳಿಸಿಕೊಟ್ಟ.

ಮಂತ್ರಾಲೋಚನ ಸಭೆ ಸೇರಿದ ನರಸಿಂಹರಾಯರು,

“ ಆದಿಲ್‌ಷಹನಿಗೂ, ಕಾಸೀಮನಿಗೂ ವೈಮನಸ್ಯವಿರುವುದು ನಮ್ಮ ಅದೃಷ್ಟ. ಬಹಮನಿರಾಜ್ಯದಿಂದ ಸಿಡಿದು, ಹೊರಬಂದಿರುವ ಈ ಐವರು ಒಟ್ಟುಗೂಡದಂತೆ ನಾವು ಎಚ್ಚರವಾಗಿರಬೇಕು. ಕಾಸೀಮನಿಗೆ ನಾವು ಸಹಾಯಮಾಡುವುದು ಈ ಸಂಧಿಯಲ್ಲಿ ಒಳ್ಳೆಯದು ” ಎಂದರು.

ಅರವೀಟಿ ಬುಕ್ಕನಾಯಕರು,

“ ಈವರೆಗೆ ನಮಗಿದ್ದುದು ಬಹಮನಿರಾಜ್ಯದ ಕಾಟವೊಂದೇ – ಈಗ

ಐವರ ಕಾಟ ಎದುರಿಸಬೇಕಾಗಿದೆ. ಕಾಸೀಮನಿಗೆ ನಾವು ಸಹಾಯ ಮಾಡಿದರೆ ಆದಿಲ್‌ಷಹ ಬದ್ಧದ್ವೇಷ ಸಾಧಿಸುತ್ತಾನೆ. ಈ ಸುಂದೋಪಸುಂದರು ತಮ್ಮ ತಮ್ಮಲ್ಲಿಯೇ ಜಗಳವಾಡಿಕೊಳ್ಳಲು ಬಿಟ್ಟುಬಿಡುವುದು ಲೇಸು " ಎಂದರು.

" ತಮ್ಮತಮ್ಮಲ್ಲಿಯೇ ಅವರು ಜಗಳವಾಡಿಕೊಂಡರೂ, ಇಸ್ಲಾಮಿನ ಪ್ರಶ್ನೆ ಬಂದಾಗ ಒಂದಾಗಿ ಬಿಡುತ್ತಾರೆ ನಾಯಕರೇ. ಇದಕ್ಕೆ ನಾವು ಅವಕಾಶಕೊಡಬಾರದು. ಈಗ ಕಾಸೀಮ್ ನಮ್ಮ ನೆರವು ಕೇಳಿದ್ದಾನೆ - ಅವನಿಗೆ ನೆರವು ನೀಡೋಣ ; ನಾಳೆ ಆದಿಲ್‌ಷಹಾ ನಮ್ಮ ನೆರವು ಬೇಡುತ್ತಾನೆ, ಅವನಿಗೂ ನೆರವು ನೀಡೋಣ " ಎಂದರು.

ಮಂತ್ರಿಗಳು ಮಹಾಪ್ರಭುಗಳ ಅಭಿಪ್ರಾಯವನ್ನು ಸಮರ್ಥಿಸಿದರು.

ಇಸ್ಮಾಯಿಲನನ್ನು ಸಮ್ಮುಖಕ್ಕೆ ಬರಮಾಡಿಕೊಂಡ ನರಸಿಂಹರಾಯರು, ಸೌಹಾರ್ದ ವ್ಯಕ್ತಮಾಡಿ,

" ನಾವು ಸಹಾಯ ಮಾಡಲೊಪ್ಪಿದ್ದೇವೆಂದು ನಿಮ್ಮ ಸುಲ್ತಾನರಿಗೆ ತಿಳಿಸಿ " ಎಂದರು.

ಇಂಥ ಅನುಕೂಲ ಸಮಯ ಮತ್ತೆ ದೊರೆಯಲಾರದೆಂದು ಭಾವಿಸಿದ ಮಹಾಪ್ರಭುಗಳು, ಮಿತ ಸೈನ್ಯದೊಂದಿಗೆ ದಂಡಯಾತ್ರೆ ಹೊರಟು ಲೀಲಾಜಾಲವಾಗಿ ರಾಯಚೂರು, ಮುದಕಲ್ಲು ಕೋಟೆಗಳನ್ನು ವಶಪಡಿಸಿಕೊಂಡರು.

ತನಗಾದ ಪರಿಭವಕ್ಕೆ ಆದಿಲ್‌ಷಹ ಪರಿತಪಿಸಿ, ಕಾಸೀಂ ಬರೀದನನ್ನು ಶಪಿಸಿದ.

ರಾಯಚೂರು, ಮುದಕಲ್ಲು ಕೋಟೆಗಳನ್ನು ಸ್ವಾಧೀನಪಡಿಸಿಕೊಳ್ಳುವುದು ಹೇಗೆಂಬ ಚಿಂತೆ ಅವನನ್ನು ಹಗಲಿರುಳು ಕಾಡಲಾರಂಭಿಸಿತು.

" ನಮ್ಮ ಶಕ್ತಿ ಸಂಘಟಿತವಾಗಿ, ವಿಜಯನಗರದೆದುರು ಹೋರಾಡುವ ಸಾಮರ್ಥ್ಯ ಬರುವವರೆಗೆ ಶಾಂತವಾಗಿರುವುದೇ ಲೇಸು."

ಎಂದು ಆದಿಲ್‌ಶಹನ ವಜೀರ್ ಜಮಾಲುದ್ದೀನ್ ಸುಲ್ತಾನನಿಗೆ ಅರಿಕೆ ಮಾಡಿಕೊಂಡ.

# ೨೪

ವಿಜಯನಗರ ಸಾಮ್ರಾಜ್ಯ ನಿಷ್ಕಂಟಕವಾಯಿತು.

ಸಂಧಿಕಾಲದಲ್ಲಾಗಿದ್ದ ಏರುಪೇರುಗಳನ್ನು ತಿದ್ದಿ ರಾಜ್ಯವನ್ನು ಸುವ್ಯವಸ್ಥೆ ಗೊಳಿಸುವ ಕೆಲಸದಲ್ಲಿ ಮಹಾಪ್ರಭುಗಳು ಉದ್ಯುಕ್ತರಾದರು.

ತಿರುಮಲನಾಯಕರು, ಅರವೀಟಿ ಬುಕ್ಕನಾಯಕರು ವೃದ್ಧಾಪ್ಯ ದೆಸೆ ಯಿಂದ ನಿವೃತ್ತಿ ಬಯಸಲು, ಅವರ ಕೋರಿಕೆಯನ್ನೀಡೇರಿಸಿದ ಮಹಾ ಪ್ರಭುಗಳು ಅಣ್ಣಮರಸಯ್ಯನವರನ್ನು ಮಹಾಮಂತ್ರಿ ಸ್ಥಾನಕ್ಕೂ ಈಶ್ವರ ನಾಯಕರನ್ನು ಮಹಾದಣ್ಣಾಯಕ ಸ್ಥಾನಕ್ಕೂ ನೇಮಿಸಿದರು.

ಯುವರಾಜ ಇಮ್ಮಡಿ ನರಸಿಂಹರಾಯರು ಪ್ರಬುದ್ಧ ವಯಸ್ಕರಾಗಿದ್ದರು. ಅವರಿಗೆ ಮಹಾಪ್ರಭುಗಳು ರಾಜ್ಯಭಾರಕ್ರಮವನ್ನರುಹುತ್ತಿದುದಲ್ಲದೆ, ಮಂತ್ರಾಲೋಚನ ಸಭೆಗೂ ಕರೆದೊಯ್ಯುತ್ತಿದ್ದರು.

ಒಂದು ದಿನ ಮಂತ್ರಾಲೋಚನ ಸಭೆ ಮುಗಿಸಿಕೊಂಡು ಅಂತಃಪುರಕ್ಕೆ ಹೋಗುತ್ತಿದ್ದ ಮಹಾಪ್ರಭುಗಳನ್ನು ಯುವರಾಜರು,

“ನನ್ನದೊಂದು ಪ್ರಾರ್ಥನೆ ಇದೆ. ತಾವು ನೆರವೇರಿಸಿಕೊಡಬೇಕು.”

“ಹೇಳಿ.”

“ನಾನು ದಿಗ್ವಿಜಯ ಕೈಗೊಂಡು ಸಾಮ್ರಾಜ್ಯದ ಮೇರೆಗಳನ್ನು ವಿಸ್ತರಿಸಲು ಇಚ್ಛಿಸುತ್ತೇನೆ. ಅದಕ್ಕೆ ತಾವು ಅನುಮತಿ ದಯೆಪಾಲಿಸಬೇಕು.”

ಮಂದಸ್ಮಿತರಾದ ಮಹಾಪ್ರಭುಗಳು ಯುವರಾಜರನ್ನು ಒಳಗೆ ಕರೆದೊಯ್ದು, ಅವರ ಮುಂದೆ ತಮ್ಮ ಸಾಮ್ರಾಜ್ಯದ ನಕ್ಷೆ ಹರಹಿ,

“ಇಷ್ಟು ರಾಜ್ಯ ನಮದಾಗಿರುವಾಗ, ಇನ್ನೂ ರಾಜ್ಯ ಬೇಕೆನ್ನುತ್ತೀರಾ?”

“ದಕ್ಷಿಣ ಭಾರತದ ಇನ್ನೂ ಕೆಲವು ಭಾಗಗಳು ನಮ್ಮ ಕೈಸೇರಿಲ್ಲ.”

“ಅವುಗಳನ್ನು ವಶಪಡಿಸಿಕೊಳ್ಳುವುದು ದೊಡ್ಡ ವಿಷಯವಿಲ್ಲ ಯುವರಾಜರೇ. ರಾಜ್ಯಗಳನ್ನು ಗೆಲ್ಲಬಹುದು – ಆದರೆ ಉಳಿಸಿಕೊಳ್ಳುವುದು ಹೇಗೆ ಎಂಬುದನ್ನು ವಿಚಾರಮಾಡಬೇಕು. ಇಷ್ಟು ದಿನಗಳ ತರುವಾಯ ನಮಗೆ

ಶಾಂತಿ ಲಭಿಸಿರುವಾಗ, ಅದನ್ನು ನಿರರ್ಥಕ ಕದನಗಳಲ್ಲಿ ಕಳೆಯಲು ನಾವು ಸಮ್ಮತಿಸೆವು. ಸಾಮ್ರಾಜ್ಯದ ಅಸ್ತಿತ್ವ ದೃಢವಾಗಲು ನಾವು ಹಲವು ಕೆಲಸಗಳನ್ನು ಕೈಗೊಳ್ಳಬೇಕಾಗಿದೆ. ಅತ್ತ ನೀವೂ ಲಕ್ಷ್ಯ ಕೊಡಬೇಕು."

ಯುವರಾಜರ ಮುಖ ಕಂದಿದುದನ್ನು ಕಂಡ ಮಹಾಪ್ರಭುಗಳು,

"ನಮ್ಮ ತರುವಾಯ ಹೇಗೂ ನೀವು ಪಟ್ಟಕ್ಕೆ ಬರುವವರು. ರಾಜ್ಯದ ವಿಸ್ತಾರ, ಅದರ ವಿವಿಧ ಭಾಗಗಳ ಸ್ಥಿತಿಗತಿ ನಿಮಗೆ ತಿಳಿದಿರಬೇಕಾದುದು ಅಗತ್ಯ. ಇಡಿಯ ಕರ್ನಾಟಕವಲ್ಲದೆ ತೆಲಂಗಾಣ, ಅರವ ನಾಡಿನ ಬಹು ಭಾಗ ನಮ್ಮದಾಗಿದೆ. ನಮ್ಮ ರಾಜ್ಯದಲ್ಲಿ ದೇಶಭಾಷೆಯಾದ ಕನ್ನಡ ಮಾತಾಡುವವರಲ್ಲದೆ ತೆಲುಗು, ತಮಿಳು, ತುಳು, ಪಾರಸಿ, ಅರಬ್ಬಿ ಭಾಷೆಗಳನ್ನು ಮಾತಾಡುವ ಜನರೂ ಇದ್ದಾರೆ. ಎಲ್ಲರನ್ನೂ ಸಮಾನವಾಗಿ ಕಾಣುವುದು ನಮ್ಮ ಧರ್ಮ. ಅದಕ್ಕಾಗಿ ಈಯೆಲ್ಲ ಭಾಷೆಗಳನ್ನಾಡುವ ಜನರ ನಿಕಟಪರಿಚಯ ಹೊಂದಬೇಕೆಂದು ನಮ್ಮ ಆಸೆ. ಒಮ್ಮೆ ಪ್ರವಾಸ ಕೈಗೊಂಡು, ರಾಜ್ಯವನ್ನೆಲ್ಲಾ ನೋಡಿಕೊಂಡು ಬನ್ನಿ. ಹೋದ ಹೋದೆಡೆಗಳಲ್ಲಿ ದೇವಾಲಯಗಳನ್ನು ಜೀರ್ಣೋದ್ಧಾರಮಾಡಿ. ಅಗ್ರಹಾರಗಳನ್ನು ಕಟ್ಟಿಸಿ, ವಿದ್ವಾಂಸರನ್ನೂ ಕಲಾವಿದರನ್ನು ಬರಮಾಡಿಕೊಂಡು ಗೌರವಿಸಿ. ನೀರಿನ ಕ್ಷಾಮವಿರುವೆಡೆಗಳಲ್ಲಿ ಭಾವಿ, ಕೆರೆ, ಕುಂಟೆಗಳನ್ನು ಕಟ್ಟಿಸಿ. ನಮ್ಮನ್ನಾಳುವ ದೊರೆಗಳು ವಿಜಯನಗರದಲ್ಲಿದ್ದರೂ ನಮ್ಮ ಯೋಗಕ್ಷೇಮವನ್ನು ಉಪೇಕ್ಷಿಸುತ್ತಿಲ್ಲ ಎಂಬ ಭಾವನೆ ನಮ್ಮ ಪ್ರಜರಲ್ಲಿ ಬೆಳೆಯಲಿ. ಪ್ರಭುವಿಗೂ ಪ್ರಜೆಗೂ ನಿಕಟ ಬಾಂಧವ್ಯ ಕಲ್ಪಿಸುವ ಮಹದ್ಕಾರ್ಯ ಸಾಧಿಸಿ" ಎಂದರು.

ಯುವರಾಜರು 'ಚಿತ್ತ' ಎನ್ನಲು ಮಹಾಪ್ರಭುಗಳು,

"ಮುಳುಬಾಗಿಲಿಗೆ ಹೋಗಿ ಶ್ರೀಗುರುನಾಥರ ಆಶೀರ್ವಾದ ಪಡೆಯುವುದನ್ನು ಮರೆಯಬೇಡಿ."

ಎಂದು ಸೂಚಿಸಿದ ಮಹಾಪ್ರಭುಗಳು, ವಿಚಾರಪರರಾಗಿ,

"ನಾವು ಶ್ರೀಹರಿಯ ಚರಣಸೇರುವ ಕಾಲಸಮೀಪಿಸುತ್ತಿದೆ. ಶೇಷಾಯುಷ್ಯವನ್ನು ಭಗವದ್ಸೇವೆ, ಗುರುಸೇವೆಯಲ್ಲಿ ಕಳೆಯಬೇಕೆಂದು ಮನಸ್ಸು ತವಕಗೊಂಡಿದೆ. ಆದರೆ ಸಾಮ್ರಾಜ್ಯದ ಭಾರ ಹೊತ್ತಿರುವ ನಮಗೆ ಸ್ವಲ್ಪವೂ ವಿರಾಮವಿಲ್ಲವಾಗಿದೆ. ವಿಜಯನಗರದಲ್ಲಿ ಕೆಲವು ಕಾಲ ನಿಲ್ಲಲು ಅನುಕೂಲ

ಮಾಡಿಕೊಂಡು ಇಲ್ಲಿಗೆ ಬರಲು ಶ್ರೀಗುರುದೇವರನ್ನು ಪ್ರಾರ್ಥಿಸಿ. ಅವರು ಸಮ್ಮತಿಸಿದಲ್ಲಿ ನಾವು ಧನ್ಯರಾಗುತ್ತೇವೆ."

ಪ್ರಭುವಾಜ್ಞೆಯಂತೆ ಯುವರಾಜ ಇಮ್ಮಡಿ ನರಸಿಂಹರಾಯರು, ನರಸನಾಯಕರನ್ನು ಜತೆಯಲ್ಲಿ ಕರೆದುಕೊಂಡು, ಉಚಿತ ಪರಿವಾರದೊಂದಿಗೆ ಪ್ರವಾಸ ಹೊರಟರು.

ತೆಲುಂಗಾಣ, ತಮಿಳುನಾಡಿನ ಪ್ರದೇಶಗಳನ್ನು ಪರಾಮರ್ಶಿಸಿ, ಅಲ್ಲಿನ ಕ್ಷೇತ್ರಗಳನ್ನು ಸಂದರ್ಶಿಸಿ ಯುವರಾಜರು ಮಹಿಸುಮಂಡಲಕ್ಕೆ ಆಗಮಿಸಿದರು. ಬೇಲನಾಡು, ಶ್ರೀರಂಗಪಟ್ಟಣ, ಮೇಲುಕೋಟೆಗಳಲ್ಲಿ ದೇವರ ಸೇವೆ ಮುಗಿಸಿಕೊಂಡು ಮುಳುಬಾಗಿಲಿಗೆ ಬಂದ ಯುವರಾಜರನ್ನು ಬಹು ಪ್ರೀತಿಯಿಂದ ಶ್ರೀಗುರು ಶ್ರೀಪಾದರಾಜರು ಬರಮಾಡಿಕೊಂಡು, ಯೋಗ್ಯ ಸತ್ಕಾರಮಾಡಿದರು.

ಒಂದೆರಡು ದಿನಗಳ ತರುವಾಯ, ಮಠದಲ್ಲಿ ಶ್ರೀಗುರುಗಳನ್ನು ಸಂದರ್ಶಿಸಿದ ಯುವರಾಜರು ಭಯಭಕ್ತಿಗಳಿಂದ,

" ತಮ್ಮಲ್ಲಿ ಒಂದು ಪ್ರಾರ್ಥನೆ ಸಲ್ಲಿಸಬೇಕೆಂದು ಮಹಾಪ್ರಭುಗಳಾದ ಶ್ರೀಶ್ರೀ ನರಸಿಂಹರಾಯರು ಅಪ್ಪಣೆ ಮಾಡಿದ್ದಾರೆ."

" ಹೇಳಿ – ನಮ್ಮ ಪ್ರಿಯಶಿಷ್ಯನ ಮನಸ್ಸಂತೋಷಪಡಿಸುವುದು ನಮ್ಮ

" ಅವರ ಮನಸ್ಸಿನಲ್ಲಿ ಯಾವ ಮಥನ ಆರಂಭವಾಗಿದೆಯೋ ಏನೋ – ತಮ್ಮನ್ನು ಕಂಡು, ತಮ್ಮ ಪಾದಸೇವೆ ಮಾಡಲು ತವಕಗೊಂಡಿದ್ದಾರೆ. ಸಾಮ್ರಾಜ್ಯದ ಭಾರ ಅಧಿಕವಾಗಿದೆ – ಶ್ರೀಶ್ರೀಗುರುದೇವರೇ ಇಲ್ಲಿಗೆ ದಯೆ ಮಾಡಿಸಿ ನಮ್ಮನ್ನು ಧನ್ಯರನ್ನಾಗಿಸಬೇಕೆಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತಾರೆ."

ಸ್ವಲ್ಪಕಾಲ ಗುರುದೇವರು ಅಂತರ್ಮುಖಿಗಳಾಗಿ ಕುಳಿತರು.

ಭವಿಷ್ಯತ್ತಿನ ಚಿತ್ರಗಳು ಅವರ ಸ್ಮೃತಿಪಟಲದ ಮೇಲೆ ಸುಳಿದವು.

ಶ್ರೀಹರಿಯ ಧ್ಯಾನ ಮಾಡುತ್ತಾ ಕಣ್ದೆರೆದ ಗುರುದೇವರೇ,

" ಯುವರಾಜರೇ, ಪುಣ್ಯಭೂಮಿಯಾದ ವಿಜಯನಗರಕ್ಕೆ ಬರಲು ನಮಗೂ ಆಸೆಯಿದೆ – ಮಹಾಪ್ರಭುಗಳಂತೆ ನಾವೂ ಕರ್ತವ್ಯದ ಬಂದಿಗಳಾಗಿ

ದ್ದೇವೆ. ನಮ್ಮ ಬದಲು ನಮ್ಮ ಪ್ರಿಯಶಿಷ್ಯರಾದ ಶ್ರೀವ್ಯಾಸರಾಯರು ಬರುತ್ತಾರೆ. ಅವರನ್ನು ಕರೆದುಕೊಂಡು ಹೋಗಿ. ನಾವು ಅಲ್ಲಿಗೆ ಬಂದು ನಿರ್ವಹಿಸಬಹುದಾದ ಕರ್ತವ್ಯವನ್ನು ಶ್ರೀವ್ಯಾಸರಾಯರು ನೂರ್ಮಡಿ ದಕ್ಷತೆಯಿಂದ ನಿರ್ವಹಿಸುತ್ತಾರೆ."

ಸಂದೇಹಗ್ರಸ್ತರಾದ ಯುವರಾಜರು,

"ಗುರುದೇವಾ, ಶ್ರೀವ್ಯಾಸರಾಯರು ಯಾರು? – ನಮಗೆ ಅವರ ಪರಿಚಯವೇ ಇಲ್ಲವಲ್ಲಾ !"

ಎದುರಿಗೆ ಕುಳಿತಿದ್ದ ಧೀರ ಗಂಭೀರ ತರುಣ ಸನ್ಯಾಸಿಯನ್ನು ತೋರಿಸಿದ ಗುರುದೇವರು,

"ನಿಮಗೆ ಶ್ರೀವ್ಯಾಸರ ಪೂರ್ವಾಶ್ರಮದ ಪರಿಚಯವಿದೆ. ನಮ್ಮೊಂದಿಗೆ ಮಹಾಪ್ರಭುಗಳ ಪಟ್ಟಾಭಿಷೇಕ ಮಹೋತ್ಸವಕ್ಕೆ ರಾಜಧಾನಿಗೆ ಬಂದಿದ್ದ ಯತಿರಾಜನೇ ಈಗ ಶ್ರೀವ್ಯಾಸರಾಯರಾಗಿದ್ದಾರೆ."

ಅನುಮಾನಿಸಿದ ಯುವರಾಜರು ತಮ್ಮ ಅಭಿಪ್ರಾಯ ವ್ಯಕ್ತಗೊಳಿಸಲು ಅವಕಾಶವೀಯದೆ ಗುರುದೇವರು,

"ಯಾವದಕ್ಕೂ ನೀವು ಅನುಮಾನಿಸಬೇಕಿಲ್ಲ ಯುವರಾಜರೇ. ಈಗ ವಿಜಯನಗರಕ್ಕೆ ಬಂದು ಮಾಡಲು ಏನೂ ಕೆಲಸವಿಲ್ಲ – ಶ್ರೀವ್ಯಾಸರಾಯರು ವಿಜಯನಗರದ ರಕ್ಷಣೆಯ ಸಲುವಾಗಿಯೇ ಅವತರಿಸಿರುವ ಮಹಾಪುರುಷರು. ಅವರ ಭವಿಷ್ಯತ್ ಕಾರ್ಯರಂಗ ವಿಜಯನಗರ. ಈಗಿನಿಂದಲೇ ಅವರಿಗೆ ವಿಜಯನಗರದ ಪರಿಚಯವಾಗಿರುವುದು ಒಳ್ಳಿತು."

ಯುವರಾಜರು ಸಮ್ಮತಿಸಿ

"ಶ್ರೀಗುರು ಚಿತ್ತ" ಎಂದರು.

ಯುವರಾಜರು ಎದ್ದು ಹೋಗುವುದನ್ನೇ ಕಾಯುತ್ತಿದ್ದ ಶ್ರೀವ್ಯಾಸರು, ದೀರ್ಘವಾಗಿ ರೋಧಿಸುತ್ತಾ ಗುರುಚರಣಗಳನ್ನು ಹಿಡಿದು,

"ದಾಸನಮಾಡಿದ ಅಪರಾಧವೇನು ? ಯಾವ ಕಾರಣಕ್ಕಾಗಿ ತಮ್ಮ ಸನ್ನಿಧಿಯಿಂದ ನನ್ನನ್ನು ಹೊರದೂಡುತ್ತಿದ್ದೀರಿ. ಮುಳುಬಾಗಿಲೇ ನನ್ನ ಮಹಾಸಾಮ್ರಾಜ್ಯ – ತಾವೇ ನನ್ನ ಚಕ್ರವರ್ತಿಗಳು. ಈ ಸಾಮ್ರಾಜ್ಯ ಬಿಟ್ಟು ನಾನು ಎಲ್ಲಿಗೂ ಹೊಗಲಾರೆ."

ಶಿಷ್ಯನನ್ನು ಪ್ರೀತಿಯಿಂದ ಮೇಲೆಕ್ಕೆಬ್ಬಿಸಿ. ಅವನ ಶಿರವನ್ನು ಮುಂಡಾಡಿ,

"ನೀವು – ನಾವು ಜಗತ್ತಿನಲ್ಲಿ ಹುಟ್ಟುವ ಪ್ರತಿಯೊಂದು ಪ್ರಾಣಿಗೂ ಜೀವನದಲ್ಲಿ ಒಂದು ಉದ್ದೇಶವಿರುತ್ತದೆ – ಅದನ್ನು ಸಾಧಿಸಬೇಕಾದುದು ನಮ್ಮ ಧರ್ಮ. ಗುರುಸ್ಥಾನದಲ್ಲಿ ನಿಂತು ನಾವು ಹೇಳಿಕೊಡುವುದು ಮುಗಿದಿದೆ. ಅನೇಕ ಜನ್ಮಗಳ ಪುಣ್ಯದಿಂದ ನಿಮಗೆ ಲಭಿಸಿರುವ ಅಗಾಧ ಪಾಂಡಿತ್ಯದೊಂದಿಗೆ ನಿಮ್ಮ ತಪಸ್ಸೂ ಸೇರಿಕೊಂಡು ಚಿನ್ನಕ್ಕೆ ಪರಿಮಳ ಕೊಟ್ಟಂತಾಗಿದೆ. ಈ ಅನುಪಮಸಿದ್ಧಿ – ವಿಜಯನಗರ ಮಹಾಸಾಮ್ರಾಜ್ಯದ ಉತ್ಕರ್ಷಕ್ಕೆ ವಿನಿಯೋಗವಾಗಬೇಕು. ವಿಜಯನಗರದ ಪರ್ವಕಾಲ ಪ್ರಾಪ್ತವಾಗಲಿದೆ. ಆಗ ನೀವು ಅದರ ಮೂಲಸೂತ್ರಚಾಲಕರಾಗಿ ಸಾಮ್ರಾಜ್ಯದ ಸುಭದ್ರತೆಯನ್ನು ರಕ್ಷಿಸಬೇಕು. ಪರಮಪೂಜ್ಯರಾದ ಶ್ರೀ ವಿದ್ಯಾರಣ್ಯ ಮಹರ್ಷಿಗಳು ತಮ್ಮ ತಪಃಪ್ರಭಾವದಿಂದ ಸ್ಥಾಪಿಸಿದ ಸಾಮ್ರಾಜ್ಯ ನಿಮ್ಮ ತಪಃಪ್ರಭಾವದಿಂದ ಇತೋಪ್ಯತಿಶಯವಾದ ಕೀರ್ತಿಗಳಿಸಬೇಕು. ಮನಸ್ಸಿನಲ್ಲಿ ಯಾವ ಅನುಮಾನ, ದುಃಖವನ್ನೂ ತಳೆಯದೆ ಹೋಗಿ ಬನ್ನಿ. ಶ್ರೀಹರಿ ಸದಾ ನಿಮ್ಮ ಹೃತ್ಕಮಲದಲ್ಲಿಯೇ ನೆಲಸಿ, ನಿಮ್ಮನ್ನು ಕಾಪಾಡುತ್ತಾನೆ."

ಎಂದು ಶಿಷ್ಯನನ್ನು ಸಂತೈಸಿದರು.

ಬಹಳ ಕಾಲದಿಂದ ಲುಪ್ತವಾಗಿದ್ದ 'ಕವಿಸಭೆ' ಯನ್ನು ಪುನರುಜ್ಜೀವನ ಗೊಳಿಸಿ ಮಹಾಪ್ರಭುಗಳು ಕವಿಗಳ ಆಶ್ರಯದಾತರಾದರು. ಅವರ ಆಸ್ಥಾನ ಕವಿಯಾದ ರಾಜನಾಥ ಡಿಂಡಿಮ, 'ಸಾಳುವಾಭ್ಯುದಯ' ಎನ್ನುವ ಹೆಸರಿನಲ್ಲಿ ಸಾಳುವ ವಂಶ ಚರಿತ್ರೆಯನ್ನು ಬರೆದು, ನರಸಿಂಹರಾಯರ ಮಹದ್ಕಾರ್ಯ ಗಳನ್ನು ಉಲ್ಲೇಖಿಸಿದ. ಅವನ ಮಗ ಡಿಂಡಿಮ ಸಾರ್ವಭೌಮ 'ರಾಮಾಭ್ಯು ದಯಂ' ಎನ್ನುವ ಕಾವ್ಯ ಬರೆದು ಶ್ರೀರಾಮನ ದಿವ್ಯಚರಿತ್ರೆಯನ್ನು ನಿರೂಪಿ ಸಿದ. ಪಿಲ್ಲಾಲಮರ್ರಿ ಪೀನ ವೀರಭದ್ರ ಎನ್ನುವ ಪ್ರಸಿದ್ಧ ಕವಿ ತನ್ನ 'ಜೈಮಿನಿ ಭಾರತ' ಕಾವ್ಯವನ್ನು ನರಸಿಂಹರಾಯರಿಗೆ ಅಂಕಿತ ಮಾಡಿದ. ಇದೇ ಕವಿ 'ನವರತ್ನಮುಲು – ಸಪ್ತಾಂಗ ಪದ್ಧತಿ' ಎನ್ನುವ ಎರಡು ಕೃತಿಗಳನ್ನು ರಚಿಸಿ ರಾಜನೀತಿಯನ್ನು ಅತ್ಯಂತ ಮಾರ್ಮಿಕವಾಗಿ ವಿವರಿಸಿದ.

ಚಾಣಕ್ಯನ 'ಅರ್ಥಶಾಸ್ತ್ರ' ವನ್ನೂ, ಶ್ರೀ ವಿದ್ಯಾರಣ್ಯ ಮಹಾ ಮುನಿಗಳ ಕೃತಿಗಳನ್ನೂ ಆಧಾರವಾಗಿಟ್ಟುಕೊಂಡ ಪೀನ ವೀರಭದ್ರ ತನ್ನ 'ನವರತ್ನಮುಲು' ಗ್ರಂಥದಲ್ಲಿ:

"—ಇತರರಿಗೆ ಒಳ್ಳೆಯದನ್ನು ಮಾಡುವುದರಲ್ಲೇ ಉತ್ತಮ ರಾಜತ್ವ ನಿದರ್ಶನಕ್ಕೆ ಬರುವುದು. ಇತರರು ಮಾಡಿದ ಒಳ್ಳೆಯ ಕೆಲಸಗಳನ್ನು ರಾಜ ನಾದವನು ತನ್ನದೆಂದು ಹೇಳಿಕೊಳ್ಳಬಾರದು.

—ವಿನಯಪರತೆ, ಸಾಹಸಪ್ರಿಯತೆ, ಮಾನವ ವ್ಯವಹಾರವನ್ನು ಸಮ ತೋಲನವಾಗಿ ಅಳೆದುನೋಡುವ ಶಕ್ತಿ, ಮಾನವಾಂತಃಕರಣ, ಮಹದ್ಕಾರ್ಯ ಗಳನ್ನು ಸಾಧಿಸುವ ಹಂಬಲ, ಕೀರ್ತಿಪ್ರಿಯತೆ, ಪೌರುಷ, ದೇಶದಲ್ಲಿ ಸುಭಿಕ್ಷತೆ ಯನ್ನು ಸ್ಥಾಪಿಸುವುದು – ಇವು ಉತ್ತಮ ರಾಜನ ಸಲ್ಲಕ್ಷಣಗಳು.

—ರಾಜನಿಗೆ ಬಹುಶ್ರುತನಾದ ಮಂತ್ರಿಯಿರಬೇಕು. ಅಂಥ ಮಂತ್ರಿ ಯಿದ್ದರೆ ಅವನ ರಾಜಖಡ್ಗಕ್ಕೆ ಉದ್ಯೋಗ ದೊರೆಯುತ್ತದೆ; ರಾಜಖಡ ಬಳಸುವ ಬಗೆಯನ್ನವನು ಅರಿತರೆ ಸೈನ್ಯ ಬಲಗೊಳ್ಳುತ್ತದೆ; ಸೈನ್ಯ ಬಲಿ

ಗೊಂಡರೆ, ಶತ್ರುಗಳು ದಮನವಾಗುತ್ತಾರೆ; ಶತ್ರುಗಳನ್ನು ನಿಗ್ರಹಿಸಿದ ರಾಜನು ಅಬಾಧಿತನಾಗಿ ರಾಜ್ಯವಾಳುತ್ತಾನೆ. ವಿವೇಚನಾಶಾಲಿಯಾದ ಉತ್ತಮ ಮಂತ್ರಿ ರಾಜನಿಗೆ ರಕ್ಷಣಾಕೋಟೆಯಿದ್ದಂತೆ.

—ರಾಜನಾದವನು ಸಂಗೀತ ಪ್ರಿಯನಾಗಿರಬೇಕು; ಸಾಹಿತ್ಯಾಭಿಮಾನಿಯಾಗಿರಬೇಕು; ಮನುಷ್ಯ ಮನುಷ್ಯನಿಗೆ, ವಸ್ತು ವಸ್ತುವಿಗೆ ಇರುವ ಸೂಕ್ಷ್ಮ ಭೇದವನ್ನರಿತವನಾಗಿರಬೇಕು; ಶ್ರೀಮಂತನಾಗಿದ್ದರೂ ವಿನಯಪರನಾಗಿರಬೇಕು ಬ್ರಾಹ್ಮಣರಲ್ಲಿ ಭಕ್ತಿಯುಳ್ಳವನಾಗಿರಬೇಕು; ವಂಧಿ ಮಾಗಧರಲ್ಲಿ, ವಿದ್ಯಾಭಿಲಾಷಿಗಳಲ್ಲಿ ಅಭಿಮಾನವುಳ್ಳವನಾಗಿರಬೇಕು.

—ಉತ್ತಮ ಜನ್ಮ ತಳೆದಿರುವ ರಾಜನಲ್ಲಿ ಉತ್ತಮ ಗುಣಗಳೂ ಇರಬೇಕು – ಮೆರಗುಗೊಂಡ ಮಿಸುನಿಯಂತೆ; ಉನ್ನತಸ್ಥಾನಾನುಗುಣವಾದ ಸಂಪತ್ತು ಇರಬೇಕು – ಸ್ವಯಂಪ್ರಕಾಶಮಾನವಾದ ಕಾಶ್ಮೀರ ಪುಷ್ಪದಂತೆ; ಔದಾರ್ಯದ ಜತೆಗೆ, ಸರಸವಾಣಿಯೂ ಇರಬೇಕು – ಬಲಿತ ಕಬ್ಬಿನ ಜಲ್ಲೆಯಂತೆ; ಕೀರ್ತಿಶಾಲಿಯಾಗಬೇಕು – ಪುಷ್ಪಭರಿತ ಚಂಪಕ ವೃಕ್ಷದಂತೆ.

—ಜನಸಂದಣಿಗಳಲ್ಲಿ, ಉಗ್ರತೇಜಿಗಳನ್ನು ಪರೀಕ್ಷಿಸುವ ಎಡೆಗಳಲ್ಲಿ, ಸರ್ಪಪ್ರದರ್ಶನವಾಗುವ ಸ್ಥಳಗಳಲ್ಲಿ, ಆಹಾರ ಸ್ವೀಕರಿಸುವೆಡೆಗಳಲ್ಲಿ, ಔಷಧ ತೆಗೆದುಕೊಳ್ಳುವಾಗ, ನಿದ್ರಿಸುವಾಗ, ಬೇಟೆಯಲ್ಲಿ, ಔತಣಗಳಿಗೆ ಹೋದಾಗ, ಸಂಗೀತ, ನೃತ್ಯ ಪ್ರದರ್ಶನಗಳಲ್ಲಿ ಭಾಗವಹಿಸಿದಾಗ, ವೈದ್ಯರಿರುವೆಡೆ, ಬೀದಿಗಳಲ್ಲಿ ಜನ ಸೇರಿದಾಗ, ಜನಸಾಂದ್ರತೆಯಿಂದ ತುಂಬಿರುವ ದೇವಾಲಯಗಳಲ್ಲಿ, ವಿದೇಶೀಯರಿಗೆ ದರ್ಶನಕೊಡುವಾಗ ರಾಜನು ಆತ್ಮರಕ್ಷಣಾರ್ಥವಾಗಿ ಎಚ್ಚರವಾಗಿರಬೇಕು.

—ತಂದೆತಾಯಿಗಳ ಬಗ್ಗೆ ಭಕ್ತಿಯಿಂದ ನಡೆದುಕೊಳ್ಳುವವನು ದೇವರನ್ನು ಹುಡುಕಬೇಕಾಗಿಲ್ಲ; ಎಲ್ಲ ಪ್ರಾಣಿಗಳಿಗೂ ದಯೆ ತೋರಿಸುವವನಿಗೆ ತಪವೇಕೆ; ಮಹಾಕವಿಗಳ ಕೃತಿಗಳನ್ನೋದಿ ಆನಂದಿಸಬಲ್ಲವನಿಗೆ ಅಮೃತವೇಕೆ; ಋಜುಮಾರ್ಗದಲ್ಲಿ ನಡೆಯುವವನಿಗೆ ಯಜ್ಞಯಾಗಗಳೇಕೆ; ತಮ್ಮಂತೆಯೇ ತಮ್ಮ ಸತಿಯರು ಎಂದು ಭಾವಿಸಿ, ಅವರ ಬಗ್ಗೆ ಪ್ರೀತಿಯಿಂದ ನಡೆಯುವವನಿಗೆ ಇಂದ್ರಲೋಕವೇಕೆ?

—ಸಂಪತ್ತು ಸೋದರರಿಗೆ ದೋಚಿಕೊಡುವುದು; ದುಷ್ಟರಿಗೆ ಅಧಿಕಾರ

ಸ್ಥಾನಗಳನ್ನು ಕೊಡುವುದು ; ಬಂಧು ಬಾಂಧವರನ್ನು ದುರ್ಗಾಧಿಪತಿಗಳನ್ನಾಗಿ ನೇಮಿಸುವುದು ; ಅಯೋಗ್ಯರ ಕೈಗೆ ಭಂಡಾರ ರಕ್ಷಣೆ ಕೊಡುವುದು; ಕ್ರೂರಿಗಳನ್ನು ಪ್ರಾಂತ್ಯಾಧಿಕಾರಿಗಳನ್ನಾಗಿ ನೇಮಿಸುವುದು ; ಮೊಂಡರಿಗೆ, ಹಟಮಾರಿಗಳಿಗೆ ನಾಯಕತ್ವ ಒಪ್ಪಿಸುವುದು ; ಮೋಸಗಾರರನ್ನು ದ್ವಾರಪಾಲಕರನ್ನಾಗಿ ನೇಮಿಸುವುದು ; ಅಪನಂಬಿಕೆ ಹುಟ್ಟಿಸಿದವನನ್ನು ನಂಬುವುದು ಉತ್ತಮ ರಾಜನ ಲಕ್ಷಣಗಳಲ್ಲ.

—ಮಂತ್ರವಾದಿ, ಕುಟಿಲ, ಸತ್ಕಾರರಮೇಲಿ ಮುನಿಯಬೇಡ, ಕೋಪೋದ್ದೀಪಿತನಾದವನು, ಬದ್ಧಸಂಕಲ್ಪವುಳ್ಳವನು, ದುಷ್ಟ ಇವರಿಗೆ ನಿನ್ನ ನಿಜಾಂತರಂಗ ತೋರಿಸಬೇಡ ; ಪಿಶುಣರೊಂದಿಗೆ, ಪರದೂಷಣೆಯಲ್ಲಿ ಸಂತೋಷಪಡುವರೊಂದಿಗೆ, ದುಷ್ಟರೊಂದಿಗೆ, ರಾಜನ ಶತ್ರುಗಳೊಂದಿಗೆ, ಮೋಸಗಾರರೊಂದಿಗೆ, ಕುಟಿಲರೊಂದಿಗೆ ಬೆರೆಯಬೇಡ.

ಈ ತತ್ತ್ವಗಳನ್ನನುಸರಿಸುವ ರಾಜನೊಂದಿಗೆ ವಿರೋಧ ಕಟ್ಟಿಕೊಳ್ಳುವವನು ನಾಶಕ್ಕೆ ಗುರಿಯಾಗುತ್ತಾನೆ."

ಪೀನ ವೀರಭದ್ರ, ರಾಜನಾಥ ಡಿಂಡಿಮ, ಡಿಂಡಿಮ ಸಾರ್ವಭೌಮರಿಗೆಲ್ಲಾ ಯೋಗ್ಯ ಪುರಸ್ಕಾರ, ನೀಡಲು ನಿರ್ಧರಿಸಿದ, ನರಸಿಂಹರಾಯರು ಮಹಾಶಿವರಾತ್ರಿಯ ದಿನ '**ಸುವರ್ಣಮೇರು**' ದಾನದ ವ್ಯವಸ್ಥೆ ಮಾಡಲು ಅಣ್ಣಾಮರಸಯ್ಯನವರಿಗೆ ತಿಳಿಸಿದರು.

ಮಹಾಶಿವರಾತ್ರಿ ವ್ರತ ಪೂರೈಸಲು ಮಹಾಪ್ರಭುಗಳು, ಸಾಮಂತರಿಂದ ಬಂದಿದ್ದ ಧನ, ವಸ್ತ್ರ, ವಾಹನಾದಿಗಳನ್ನು ಸಮಸ್ತಕವಿಗಳಿಗೂ ಪಂಡಿತರಿಗೂ, ಕಲಾವಿದರಿಗೂ ಹಂಚಿಕೊಟ್ಟುಬಿಟ್ಟರು.

ಶಿವರಾತ್ರಿ ವ್ರತ ಸಾಫಲ್ಯವನ್ನು ಸೂಚಿಸುವಂತೆ ಮಾರನೆಯ ದಿನ ಮುಳುಬಾಗಿಲಿನಿಂದ ಬಂದಿದ್ದ ಅಶ್ವಾರೋಹಿ, ಯುವರಾಜರ ಪತ್ರ ತಂದು ಪ್ರಭುಗಳ ಕೈಗಿತ್ತ.

"ನಮ್ಮ ಪ್ರಿಯಶಿಷ್ಯರಾದ, ವಿಜಯನಗರ ಸಾಮ್ರಾಜ್ಯಾಧೀಶ ಶ್ರೀಶ್ರೀ ನರಸಿಂಹರಾಯರಿಗೆ ಮುಳುಬಾಗಿಲು ಮಠದ ಶ್ರೀಶ್ರೀ ಪಾದರಾಜರ ಅನೇಕಾನೇಕ ಆಶೀರ್ವಾದಗಳು :

ಚಿರಾಯುಗಳಾದ ಶ್ರೀಮದ್ಯುವರಾಜರು ತಮ್ಮ ಮನವಿ ಒಪ್ಪಿಸಿ,

ನಾವು ವಿಜಯನಗರಕ್ಕೆ ಬಂದು ನೆಲಸಬೇಕೆಂದು ಪ್ರಾರ್ಥಿಸಿದರು.

ಮಹರ್ಷಿ ವಿದ್ಯಾರಣ್ಯಮುನಿವರ್ಯ್ಯರ ತಪೋಭೂಮಿಗೆ ಬಂದು ನಮ್ಮ ಶೇಷಾಯುಷ್ಯವನ್ನು ಕಳೆಯಬೇಕೆಂದು ಮನೀಷೆಯಿದ್ದರೂ, ಸಂಸ್ಥಾನದ ಉತ್ತರವಾದಿತನ, ನಮಗೆ ಅವಕಾಶಕೊಡುತ್ತಿಲ್ಲ. ಈ ವೃದ್ಧಾಪ್ಯದಲ್ಲಿ ನಾವು ಬಂದು ಮಾಡುವುದಾದರೂ ಏನು ?

ನಮ್ಮ ಪ್ರಿಯಶಿಷ್ಯರು, ಶ್ರೀಬ್ರಹ್ಮಣ್ಯತೀರ್ಥ ಮಹಾಸ್ವಾಮಿಗಳಿಂದ ಅನುಗ್ರಹಿತರಾಗಿರುವ ಶ್ರೀವ್ಯಾಸತೀರ್ಥರನ್ನು ಶ್ರೀಮದ್ಯುವರಾಜರೊಂದಿಗೆ ಕಳಿಸಿಕೊಡುತ್ತಿದ್ದೇವೆ.

ಶ್ರೀವ್ಯಾಸತೀರ್ಥರ ಜೀವನಕ್ಕೂ ವಿಜಯನಗರದ ಸಾಮ್ರಾಜ್ಯದ ಭವಿಷ್ಯತ್ತಿಗೂ ಅಪಾರ್ಥಿವ ಸಂಬಂಧವಿದೆಯೆಂಬುದು ಕಾಲಾನುಕ್ರಮದಲ್ಲಿ ನಿಮಗೇ ತಿಳಿದು ಬರುತ್ತದೆ.

ಗುರುಭಕ್ತಕೇಸರಿಗಳೂ, ದೈವಭಕ್ತಿ ಸಂಪನ್ನರೂ ಆದ ನಿಮಗೆ ಹೆಚ್ಚು ಹೇಳಬೇಕಾದ ಆವಶ್ಯಕವಿಲ್ಲ. ಶ್ರೀಹರಿಯ ಅಪಾರ ಕೃಪೆ, ನಿಮ್ಮನ್ನೂ, ನಿಮ್ಮ ಪ್ರಜಾವರ್ಗವನ್ನೂ ಸದಾ ಸಂರಕ್ಷಿಸಲಿ ಎಂದು ಹಾರೈಸುತ್ತೇವೆ."

ಗುರುದೇವರ ಪತ್ರವನ್ನೋದಿಕೊಂಡು, ಅದನ್ನು ಕಣ್ಣಿಗೊತ್ತಿಕೊಂಡು,

"ಅಣ್ಣಮರಸಯ್ಯನವರೇ – ವಿಜಯನಗರ ಸಾಮ್ರಾಜ್ಯಕ್ಕೆ ನಾವು ದೊರೆಗಳು. ನಮ್ಮ ದೊರೆಗಳು ಮುಳುಬಾಗಿಲಿನಿಂದ ದಯೆಮಾಡಿಸುತ್ತಾರೆ. ಅವರಿಗೆ ಯಥಾಯೋಗ್ಯವಾದ ಸ್ವಾಗತ, ಇಳಿದುಕೊಳ್ಳಲು ತುಂಗಭದ್ರಾ ತೀರದಲ್ಲಿ ಭವ್ಯಭವನ ಸಿದ್ಧವಾಗಲಿ."

ಎಂದು ಆಜ್ಞೆ ಮಾಡಿದರು.

## ೨೬

ಸಕಲ ಗೌರವದೊಂದಿಗೆ ಪುರಪ್ರವೇಶ ಮಾಡಿದ ಶ್ರೀವ್ಯಾಸತೀರ್ಥ ಭಗವಾನರು, ಪಂಪಾತೀರದಲ್ಲಿ ಒಂದು ಗುಡ್ಡದ ಮೇಲಿದ್ದ ಭವ್ಯ ಭವನದಲ್ಲಿ ನೆಲಸಿದರು. ಅವರು ನಿತ್ಯ ನೈಮಿತ್ತಿಕ ಕರ್ಮಗಳು, ಭಾಗವತಸೇವೆ, ಅನ್ನದಾನ, ಆರಾಧನೆಗಳಿಗೆ ಸ್ವಲ್ಪವೂ ಲೋಪಬಾರದಂತೆ ಅಣ್ಣಮರಸಯ್ಯ ನವರು ತಕ್ಕ ವ್ಯವಸ್ಥೆ ಮಾಡಿದರು.

ಇಡಿಯ ರಾಜ್ಯ ನಂದನವನವಾಯಿತು.

ಪೌರರು ತಮ್ಮ ದೈನಂದಿನ ಕೆಲಸ ಕಾರ್ಯಗಳಲ್ಲಿ ಉದ್ಯುಕ್ತರಾಗಿದ್ದರು. ವ್ಯಾಪಾರಿಗಳು, ಕರ್ಮಕುಶಲಿಗಳು, ರೈತರು, ತಮ್ಮ ತಮ್ಮ ವೃತ್ತಿಗಳಲ್ಲಿ ಪ್ರಗತಿ ಸಾಧಿಸುತ್ತಿದ್ದರು.

ದೇಶದಲ್ಲಿ ಶಾಂತಿ, ಸುಭಿಕ್ಷತೆ ನೆಲಸಲು ಲಕ್ಷ್ಮೀ ಲಾಸ್ಯವಾಡಿದಳು.

ಸಂಗೀತಪುರದ ಆಧಿಪತ್ಯ ನಡೆಸುತ್ತಿದ್ದ ಸಾಳ್ವರ ಇನ್ನೊಂದು ಮನೆತನದ ಮಲ್ಲಿನಾಥರ ಮಗಳು ಚಿನ್ನಾದೇವಿಯನ್ನು ತಂದು ಮಹಾಪ್ರಭುಗಳು ಕುಮಾರ ನರಸಿಂಹನ ವಿವಾಹವನ್ನು ವಿಜೃಂಭಣೆಯಿಂದ ನೆರವೇರಿಸಿದರು.

ಮಹಾಪ್ರಭುಗಳು ಓರ್ಮುಜ್, ಏಡನ್‌ಗಳಿಂದ ಹೇರಳ ದ್ರವ್ಯವಿತ್ತು ಜಾತ್ಯಶ್ವಗಳನ್ನು ತರಿಸಿದರು. ಅವರ ಔದಾರ್ಯ, ಪ್ರಾಮಾಣಿಕತೆಯನ್ನು ವಿದೇಶೀಯ ವ್ಯಾಪಾರಿಗಳು ಹಾಡಿ ಹೊಗಳಿದರು. ಓರ್ಮುಜ್ ಏಡನ್‌ಗಳಿಂದ ಬರುತ್ತಿದ್ದ ಕುದುರೆಗಳಲ್ಲಿ ಕೆಲವು ದಾರಿಯಲ್ಲೇ ಮೃತಿ ಹೊಂದುತ್ತಿದ್ದವು. ಅವುಗಳ ಬಾಲವನ್ನು ತಂದು ತೋರಿಸಿದರೆ ಸಾಕು – ಮಹಾಪ್ರಭುಗಳು ಅವು ಗಳಿಗೆ ನಿಗದಿಯಾಗಿದ್ದ ಪೂರ್ಣ ಬೆಲೆಯನ್ನು ಕೊಟ್ಟುಬಿಡುತ್ತಿದ್ದರು.

ಮುಸಲ್ಮಾನರ ಧಾಳಿಗೆ ಸಿಕ್ಕಿ ಭಗ್ನವಾಗಿದ್ದ ಸಮಸ್ತ ದೇವಾಲಯ ಗಳನ್ನು ಮಹಾಪ್ರಭುಗಳು ಜೀರ್ಣೋದ್ಧಾರ ಮಾಡಿ, ಅವುಗಳಲ್ಲಿ ಅವ್ಯಾಹತ ವಾಗಿ ಪೂಜೆ, ಸೇವೆ ನಡೆಯಲು ದಾನದತ್ತಿಗಳನ್ನಿತ್ತರು.

ಒಂದು ವರ್ಷ ಅಬಾಧಿತವಾಗಿ ಕಳೆದು ಹೋಯಿತು.

ಒಂದು ದಿನ ಮುಳುಬಾಗಿಲಿನಿಂದ ಬಂದ ಶ್ರೀಮಠದ ಅಧಿಕಾರಿಗಳು ಮಹಾಪ್ರಭುಗಳನ್ನು ಕಂಡು,

" ಜೇಷ್ಠ ಶುದ್ಧ ಚತುರ್ದಶಿಯ ದಿನ ಶ್ರೀಶ್ರೀ ಪಾದರಾಜ ಯತಿವರ್ಯರು ಬೃಂದಾವನಸ್ಥರಾದರು."

ಎಂಬ ಘೋರ ಸುದ್ದಿಯನ್ನರುಹಿದರು.

ವಜ್ರಾಘಾತಕ್ಕೆ ಸಿಲುಕಿದ ಮದಕರಿ ಕೆಳಗುರುಳುವಂತೆ ಮಹಾಪ್ರಭುಗಳು ಕೆಳಗೆ ಬಿದ್ದುಬಿಟ್ಟರು.

ದುಃಖತಪ್ತರಾಗಿದ್ದ ಶ್ರೀವ್ಯಾಸ ಭಗವಾನರೇ ದಯೆಮಾಡಿಸಿ ಮಹಾಪ್ರಭುಗಳನ್ನು ಸಂತೈಸಿ, ಪರ್ವತಧಾರೆಯಂತೆ ಕಣ್ಣುಗಳಿಂದಿಳಿಯುತ್ತಿದ್ದ ಪ್ರವಾಹವನ್ನು ತಡೆಗಟ್ಟುತ್ತಾ,

" ವಂದೇ ಶ್ರೀಪಾದರಾಜಂ ರುಚಿತಮ ಹೃದಯ.ಂ ಪೂಜಿತ ಶ್ರೀ ಸಹಾಯಂ
ನಿರ್ಧೂತಾಶೇಷ ಹೇಯಂ ನಿಭೃತ ಶುಭ ಚಯಂ ಭೂಮಿದೇವಾಭಿಗೇಯಂ ||
ವಿಪ್ರೇಭ್ಯೋ ದತ್ತದೇಯಂ ನಿಜಜನಸದಯಂ ಖಂಡಿತಾಶೇಷ ಮಾಯಂ
ನಿಷ್ಟಪ್ತ ಸ್ವರ್ಣಕಾಯಂ ಬಹುಗುಣನಿಲಯಂ ವಾದಿಸಂಘೈರಜೇಯಂ ||೧||

ಕ್ಷುಭ್ಯದ್ವಾದಿ ಕರೀಂದ್ರ ವಾದಪಟಲೀ ಕುಂಭಚ್ಛಟಾ ಭೇದನ
ಪ್ರೌಢ ಪ್ರಾಭವ ತರ್ಕ ಸಂಘ ನಿಕರ ಶ್ರೇಣೀ ವಿಲಾಸೋಜ್ವಲಃ
ಗೋಪೀನಾಥ ಮಹೇಂದ್ರ ಶೇಖರಲಸತ್ಪಾದ ಸ್ಥಲಾವಾಸ ಕೃ
ತ್ಪಾಯಾನಾಂ ಭವಘೋರ ಕುಂಜರ ಭಯಾಚ್ಛ್ರೀಪಾದರಾಟ್ ಕೇಸರೀ ||೨||

ಬಿಭ್ರಾಣಂ ಕ್ಷ್ಮಾಮವಾಸಃ ಕರಧೃತವಲಯಂ ಹಾರಕೇಯೂರ ಕಾಂಚೀ

ಗ್ರೈವೇಯ ಸ್ವರ್ಣಮಾಲಾ ಮಣಿಗಣ ಖಚಿತಾನೇಕ ಭೂಷಾ ಪ್ರಕರ್ಷಂ
ಭುಂಜಾನಂ ಷಷ್ಠಿ ಶಾಕಂ ಹಯಗಜ ಶಿಖಿಕಾನರ್ಘ್ಯ ಶಯ್ಯಾ ರಥಾಢ್ಯಃ
ವಂದೇ ಶ್ರೀಪಾದರಾಜಂ ತ್ರಿಭುವನವಿದಿತಂ ಘೋರ ದಾರಿದ್ರ್ಯ ಶಾಂತ್ಯೈ ||೩||

ಯದ್ವೃಂದಾವನ ಸೇವಯಾ ಸುವಿಮಲಾಂ ವಿದ್ಯಾಂ ಪಶೂನ್ಸಂತತಿಂ
ಜ್ಞಾನಜ್ಞಾನ ಮನಲ್ಪ ಕೀರ್ತಿನಿವಹಂ ಪ್ರಾಪ್ನೋತಿ ಸೌಖ್ಯಂ ಜನಃ
ತಂವಂದೇ ನರಸಿಂಹತೀರ್ಥ ನಿಲಯಂ ಶ್ರೀವ್ಯಾಸರಾಟ ಪೂಜಿತಂ
ಧ್ಯಾಯಂತಂ ಮನಸಾ ನೃಸಿಂಹ ಚರಣಂ ಶ್ರೀಪಾದರಾಜಂ ಗುರುಂ ||೪||

ಕಾಶೀಕೇದಾರ ಮಾಯಾ ಕರಿಗಿರಿ ಮಧುರಾ ದ್ವಾರಕಾ ವೆಂಕಟೇಶ
ಶ್ರೀಮುಷ್ಣಕ್ಷೇತ್ರ ಪೂರ್ವತ್ರಿಭುವನ ವಿಲಸತ್ಪುಣ್ಯ ಭೂಮಿ ನಿವಾಸಃ
ಗುಲ್ಮಾದಿ ವ್ಯಾಧಿಹರ್ತಾ ಗುರು ಗುಣನಿಲಯೋ ಭೂತವೇತಾಳ ಭೇದೀ
ಭೂಯಾಚ್ಛ್ರೀಪಾದರಾಜೋ ನಿಖಿಲ ಶುಭತತಿ ಪ್ರಾಪ್ತಯೇ ಸಂತತಂನಃ ||೫||

ಎಂದು ಗುರುದೇವರ ಗುಣಗಾನ ಮಾಡಿದರು.

ಇಡಿಯ ರಾಜಧಾನಿಯೇ ಶೋಕ ಸಾಗರದಲ್ಲಿ ಮುಳುಗಿತು.

ವಿಧ್ಯುಕ್ತವಾಗಿ ನಡೆಯಬೇಕಾಗಿದ್ದ ಎಲ್ಲ ಕರ್ತವ್ಯಗಳನ್ನೂ ನೇರವೇರಿಸಿ ಮಹಾಪ್ರಭುಗಳು ಹೇರಳವಾಗಿ ಧನ್ಯ, ಧಾನ್ಯ, ಗೋಸಂಪತ್ತು, ಭೂಮಿ ಗಳನ್ನು ದಾನವಾಗಿತ್ತರು.

ಮಹಾಪ್ರಭುಗಳಲ್ಲಿ ಸುಪ್ತವಾಗಿದ್ದ ವೈರಾಗ್ಯಭಾವನೆ ಪ್ರಜೋದಿತ ವಾಯಿತು. ರಾಜ್ಯಾಡಳಿತದ ಪೂರ್ಣ ಜವಾಬ್ದಾರಿಯನ್ನು ಯುವರಾಜರಿಗೆ ವಹಿಸಿ, ಅವರು ತಮ್ಮ ಸಮಸ್ತ ಕಾಲವನ್ನೂ ಭಗವದಾರ್ಚನೆ, ಪಾರಾಯಣ, ಸದ್ವ್ಯಾಲಕ್ಷೇಪಗಳಿಗೆ ನಿವೇದಿಸಿದರು.

ಮುದಗಲ್ಲು, ರಾಯಚೂರುಗಳನ್ನು ಕಳೆದುಕೊಂಡಿದ್ದ ವಿಜಾಪುರದ ಆದಿಲ್‌ಷಹಾ ಈ ಸಮಯಸಾಧಿಸಿ ರಾಯಚೂರಿನ ಮೇಲೆ ಧಾಳಿ ಮಾಡಿದ. ಈಶ್ವರನಾಯಕರ ಪುತ್ರ ನರಸನಾಯಕ ತುಂಗಭದ್ರೆಯನ್ನು ದಾಟಿ, ರಾಯಚೂರಿನ ರಕ್ಷಣೆಗೆ ಹೊರಟ.

ನರಸನಾಯಕನ ಪರಾಕ್ರಮ ಕಂಡು ವಿಜಾಪುರದ ಸೈನ್ಯ ತಲ್ಲಣಗೊಂಡಿತು. ಮೊದಲು ಮೂರು ದಿನ ಅವನ ಕೈಮೇಲಾಯಿತು.

ನಾಲ್ಕನೆಯ ದಿನ ಆದಿಲ್‌ಷಹ ಸಂಧಿಯ ಶ್ವೇತ ಪತಾಕೆಯನ್ನು ತೋರಲು ನರಸನಾಯಕ ಯುದ್ಧ ನಿಲ್ಲಿಸಿ, ಷಹನ ಆಗಮನ ನಿರೀಕ್ಷಿಸುತ್ತ ಪಾಳೆಯದಲ್ಲಿ ಕುಳಿತ.

ಯುದ್ಧ ನಿಯಮವನ್ನುಲಂಘಿಸಿದ ಆದಿಲ್‌ಷಹ, ತನ್ನ ಸೈನ್ಯವನ್ನು ನಾಯಕನ ಪಾಳೆಯದ ಮೇಲೆ ನುಗ್ಗಿಸಿ ಕಗ್ಗೊಲೆಯನ್ನಾರಂಭಿಸಿದ.

ವಿಜಯನಗರದ ಸೈನ್ಯಕ್ಕೆ ದಿಕ್ಕೇ ತೋರದಾಯಿತು. ಅಶ್ವಗಳು, ಗಜಗಳು ಅವಾಂತರಗೊಂಡು ಮನಸ್ಸು ಬಂದೆಡೆ ನುಗ್ಗಲಾರಂಭಿಸಿದವು. ಅವುಗಳ ತುಳಿತಕ್ಕೆ ಸಿಕ್ಕಿ ನೂರಾರು ಸೈನಿಕರು ಮರಣ ಹೊಂದಿದರು. ಅಳಿದುಳಿದವರು ಓಡಿಹೋಗಲಾರಂಭಿಸಿದರು.

ನರಸನಾಯಕ ಸೋಲನ್ನೊಪ್ಪಿಕೊಂಡು, ಮುದಗಲ್, ರಾಯಚೂರು ಕೋಟೆಗಳನ್ನು ಆದಿಲ್‌ಶಹನಿಗೆ ಒಪ್ಪಿಸಿ, ಅವನತಮುಖನಾಗಿ ರಾಜಧಾನಿಗೆ ಹಿಂದಿರುಗಿದ.

ಗುರುದೇವರು ಬೃಂದಾವನಸ್ಥರಾದ ಸುದ್ದಿ ಕೇಳಿಯೇ ಹಣ್ಣಾಗಿದ್ದ ಪ್ರಭುಗಳು ರಾಯಚೂರು, ಮುದಗಲ್ ಪತನದ ಸುದ್ದಿ ಕೇಳಿ, ಚಿಂತಾಕ್ರಾಂತರಾಗಿ ಹಾಸಿಗೆ ಹಿಡಿದು ಮಲಗಿಬಿಟ್ಟರು.

ಆಸ್ಥಾನದ ವೈದ್ಯ ನಿಪುಣರ ಜಾಣ್ಮೆ ಯಾವ ಪ್ರಯೋಜನಕ್ಕೂ ಬರಲಿಲ್ಲ.

ಒಂದು ದಿನ ಯುವರಾಜನನ್ನು ಹತ್ತಿರ ಕರೆದು ಮಹಾಪ್ರಭುಗಳು,

"ನಮ್ಮ ಕಾಲ ಸಮೀಪಿಸಿತು. ಇನ್ನು ನೀವು ರಾಜ್ಯಾಧಿಕಾರ ವಹಿಸಿಕೊಳ್ಳುವುದಕ್ಕೆ ಸಿದ್ಧರಾಗಬೇಕು. ಸ್ವಲ್ಪವೂ ಲೋಪ ಬರದಂತೆ ಗುರುಸೇವೆ ಮಾಡಿಕೊಂಡು ಬನ್ನಿ – "

ಎಂದು ಗದ್ಗದಕಂಠರಾಗಿ,

" ಅಮ್ಮಾಜಿಯವರು ದುಃಖದಿಂದ ಕುಸಿಯದಂತೆ ನೋಡಿಕೊಳ್ಳಿ. ಅವರೇ ನಮ್ಮ ಭಾಗ್ಯದೇವತೆ. ಕಷ್ಟದಲ್ಲಿ, ಸುಖದಲ್ಲಿ ಒಂದೇ ರೀತಿ ನಡೆದುಕೊಂಡು, ನಮ್ಮ ಬಾಳನ್ನು ಹಸನು ಮಾಡಿದ್ದಾರೆ "

ಎನ್ನಲು ಗಂಜನಿಗರೆಯುತ್ತಿದ್ದ ಶ್ರೀರಂಗಮಾಂಬಾ ಅವರು, ಪ್ರಭುಗಳ ಪಾದಗಳನ್ನು ಬಿಗಿಹಿಡಿದು,

" ನಿಮ್ಮನ್ನು ಅಗಲಿ ನಾನಿರಲಾರೆ – ದಯೆಯಿಟ್ಟು ಸಹಗಮನಕ್ಕೆ ಅಪ್ಪಣೆ ದಯೆಪಾಲಿಸಿ."

" ರಂಗಾ, ಯುವರಾಜರು ಇನ್ನೂ ಚಿಕ್ಕವರು. ನೀನು ಅವರ ಸಹಾಯಕಳಾಗಿ ನಿಂತು, ಸಾಮ್ರಾಜ್ಯದ ಹಿತಸಾಧಿಸಬೇಕು."

" ಸದ್ಗುರು ಶ್ರೀವ್ಯಾಸಭಗವಾನರಿರುವಾಗ ಯುವರಾಜರಿಗೆ ಯಾವ ಭಯವೂ ಇಲ್ಲ. ತಾವು ಮಾತ್ರ ನನ್ನನ್ನು ಅನಾಥಳನ್ನಾಗಿ ಮಾಡಬೇಡಿ."

ಎಂದು ಸೆರಗೊಡ್ಡಿ ಬೇಡಿಕೊಳ್ಳಲು ಮಹಾಪ್ರಭುಗಳು,

" ನಿನ್ನ ಇಷ್ಟ " ಎಂದರು.

ಮಹಾಪ್ರಭುಗಳ ಇಚ್ಛೆಯಂತೆ ಯುವರಾಜರು, ಮಂತ್ರಿಗಳನ್ನು ಬಳಿ ಮಾಡಿ ಶ್ರೀವ್ಯಾಸಭಗವಾನರನ್ನು ಕರೆತರಲು ಅಣ್ಣಮರಸಯ್ಯನವರನ್ನು ಕಳಿಸಿದರು.

ಮೆಲ್ಲನೆದ್ದ ಮಹಾಪ್ರಭುಗಳು ತಮ್ಮ ಪೂಜಾಮಂದಿರದಲ್ಲಿದ್ದ ಶ್ರೀಶ್ರೀ ಪಾದರಾಜ ಗುರುವರ್ಯರ ಪಾದುಕೆಗಳನ್ನು ತಲೆಯಮೇಲೆ ಹೊತ್ತುಕೊಂಡು ಬಂದು, ಅವುಗಳನ್ನು ಪದೇಪದೇ ಕಣ್ಣಿಗೊತ್ತಿಕೊಂಡು ಗುರುಧ್ಯಾನ ಮಾಡುತ್ತಾ ಕುಳಿತರು.

ಅಣ್ಣಮರಸಯ್ಯನವರೊಂದಿಗೆ ಆಗಮಿಸಿದ ಶ್ರೀವ್ಯಾಸಭಗವಾನರು, ಪ್ರಭುಗಳ ಬಳಿ ಸಾರಿ,

" ತಮ್ಮ ಕೋರಿಕೆಯಂತೆ ನಾವು ಬಂದಿದ್ದೇವೆ " ಎಂದರು.

ಕಣ್ಣುಬಿಟ್ಟು ನೋಡಿದ ಮಹಾಪ್ರಭುಗಳು, ಎದ್ದುನಿಂತು,

" ಭಗವಾನ್ – ಶ್ರೀಹರಿ ನಮಗೆ ವಿಜಯನಗರದ ಸಾಮ್ರಾಜ್ಯ ಪದವಿ

ಅನುಗ್ರಹಿಸಿದ; ಶ್ರೀಗುರು ಶ್ರೀಪಾದರಾಜರು ಈ ಪಾದುಕೆಗಳನ್ನು ಅನುಗ್ರಹಿಸಿದರು. ಸಾಮ್ರಾಜ್ಯವನ್ನು ನಾವು ಈಗಾಗಲೇ ಶ್ರೀಗುರು ಶ್ರೀಪಾದರಾಜರಿಗೆ ಒಪ್ಪಿಸಿದ್ದೇವೆ. ನಮ್ಮಲ್ಲಿರುವ ಈ ಅಪರೂಪ ಪಾದುಕೆಗಳನ್ನು ತಾವು ಒಪ್ಪಿಸಿಕೊಂಡು ಅನುಗ್ರಹಿಸಬೇಕು."

ಪರಮಭಕ್ತಿಯಿಂದ ಪಾದುಕೆಗಳನ್ನು ವ್ಯಾಸಭಗವಾನರು ಸ್ವೀಕರಿಸಿ, ಅವುಗಳನ್ನು ತಮ್ಮ ಶಿರಸ್ಸಿನ ಮೇಲೆ ಧರಿಸಿದರು.

ಅಂಜಲಿಬದ್ಧರಾದ ಮಹಾಪ್ರಭುಗಳು,

"ಭಗವಾನ್, ನನ್ನ ಕೊನೆಯ ಪ್ರಾರ್ಥನೆ ಲಾಲಿಸಿ. ಭಾಗವತಸೇವೆ ನಡೆಸಿ. ಸದ್ಗುರುನಾಥನ ವಚನಾಮೃತಪಾನಮಾಡುತ್ತ ಇಹಲೋಕಯಾತ್ರೆ ಮುಗಿಸಿಬಿಡುತ್ತೇವೆ."

ಸ್ಥಿತಪ್ರಜ್ಞರಾದ ವ್ಯಾಸಭಗವಾನರು, ಉಕ್ಕಿ ಬರುತ್ತಿದ್ದ ದುಃಖ ನುಂಗಿಕೊಂಡು,

ನಾರಾಯಣ ನಿನ್ನ ನಂಬಿದೆ, ಲಕ್ಷ್ಮೀ<br>
ನಾರಾಯಣ ನಿನ್ನ ನಂಬಿದೆ ನಿನ್ನ<br>
ಹೊರತು ಪೊರೆವ ದೈವವೆಲ್ಲಿದೆ ನಾ –<br>
ಮಾರಿ ದುಷ್ಕರ್ಮವ ಮಾಡಿದೆ ಅ<br>
ಪಾರಮಹಿಮ ದಯನಿಧೇ ಲಕ್ಷ್ಮೀ ||ಪ||

ನಾನಾಯೋನಿಗಳಲ್ಲಿ ಬಂದೆನೊ, ಜ್ಞಾನ<br>
ಹೀನನಾಗಿ ಬಲು ನೊಂದೆನೊ ದೀನ<br>
ರಕ್ಷಕ ಎನ್ನಗತಿ ಮುಂದೇನೊ ಮಾನ<br>
ದಿಂದ ಪಾಲಿಸುವಂಥ ದೊರೆ ನೀನು ಲಕ್ಷ್ಮೀ ||೧||

ದಾಸರಮನ ಉಲ್ಲಾಸನೆ, ಶ್ರೀಶ<br>
ಆಶ್ರಿತ ಜನರನು ಪೋಷಿಸಿ ಸಾಸಿ<br>
ರಾದಿ ಅನಂತವತಾರನೆ ಕ್ಲೇಶ<br>
ನಾಶಪಡಿಸೊ ಶ್ರೀನಿವಾಸನೆ, ಲಕ್ಷ್ಮೀ ||೨||

ರಂಗನಗರದಿ ಉತ್ತುಂಗನೆ, ಉ
ತ್ತುಂಗ ಗುಣಗಳಂತರಂಗನೆ ಗಂಗಾ
ಜನಕ ಗರುಡ ತುರಂಗನೆ ಅ
ಸಂಗಪಿತನೆ ರಂಗವಿಠಲನೆ ಲಕ್ಷ್ಮೀ ||೩||

ಎಂದು ಹಾಡಿದರು,

ಕಣ್ಣುಮುಚ್ಚಿ ಮಹಾಪ್ರಭುಗಳು 'ಶ್ರೀಹರಿ, ಶ್ರೀಹರಿ; ಶ್ರೀಗುರು ಶ್ರೀಗುರು' ಎಂದು ಧ್ಯಾನಿಸುತ್ತ ಮಲಗಿದರು.

ಆಳಿದ ಮಹಾಪ್ರಭುಗಳ ಉತ್ತರಾಧಿಕಾರಿಗಳಾಗಿದ್ದ ಇಮ್ಮಡಿ ನರಸಿಂಹ ರಾಯರು ಪಟ್ಟಕ್ಕೆ ಬಂದರು. (೧೪೯೧) ಶ್ರೀವ್ಯಾಸಭಗವಾನರ ಅಮೃತ ಹಸ್ತದಿಂದಲೇ ಅವರಿಗೆ ಕಿರೀಟಧಾರಣೆಯಾಯಿತು.

ಹಿರಿಯರೂ, ವಯೋವೃದ್ಧರೂ ಆಗಿದ್ದ ನಾಗನುನಾಯಕ, ಚಿಟ್ಟಿ ಗಂಗಣ್ಣ, ಅರವೀಟಿ ಬುಕ್ಕನಾಯಕ, ಅಣ್ಣಮರಸಯ್ಯ, ನರಸನಾಯಕರು ವಿಶ್ರಾಂತಿ ಸುಖವನ್ನುಪೇಕ್ಷಿಸಲು ನೂತನ ಪ್ರಭುಗಳು ಅವರ ಕೋರಿಕೆಯನ್ನೀ ಡೇರಿಸಿ, ಈಶ್ವರನಾಯಕರ ಪುತ್ರರಾದ ನರಸನಾಯಕನನ್ನು ಮಹಾಪ್ರಧಾನಿ ಯನ್ನಾಗಿ ನೇಮಿಸಿದರು.

ಸಾಮ್ರಾಜ್ಯಸೇವಾನಿಷ್ಠರಾಗಿ ಉಪನಾಯಕ ಸ್ಥಾನದಲ್ಲಿದ್ದ ಎರಮಂಚಿ ತುಳುಕಣ್ಣ ನಾಗನಾಯಕರನ್ನು ಮಂತ್ರಿ ಪದವಿಗೇರಿಸಿ, ಮಂಗರಸರನ್ನು ರಾಯಭಂಡಾರಿಗಳಾಗಿ ನೇಮಿಸಲಾಯಿತು.

ದಕ್ಷನೂ, ವ್ಯವಹಾರ ನಿಪುಣನೂ, ಶೂರಾಗ್ರಣಿಯೂ ಆದ ನರಸ ನಾಯಕ ಮಹಾಪ್ರಧಾನಿ ಪೀಠವನ್ನಲಂಕರಿಸಿದ ಎರಡು ಮೂರು ತಿಂಗಳಲ್ಲಿಯೇ ತನ್ನ ಪ್ರಭಾವ ಬೀರಿದ.

ಅಶ್ವಗಳಿಗಾಗಿ ವಿಜಯನಗರದಿಂದ ಮುಂಗಡ ಹಣ ಪಡೆದಿದ್ದ ಏಡನ್ನಿನ ವರ್ತಕರು, ಅಶ್ವಗಳನ್ನೊದಗಿಸಲು ವಿಳಂಬಮಾಡಲು, ನರಸನಾಯಕ ಅವರಿಗೆ ನಿರೂಪ ಕಳಿಸಿ, ಭಟಕಳದ ಮುಸಲ್ಮಾನರಿಗೆ ಹಿಂದೆ ಆದ ಶಾಸ್ತಿಯನ್ನು ಜ್ಞಾಪಿಸಿದ. ಮಹಾಪ್ರಧಾನಿಯ ಎಚ್ಚರಿಕೆ ಕಂಡು ಭಯಗ್ರಸ್ತರಾದ ಏಡನ್ನಿನ ಮುಸಲ್ಮಾನ ವರ್ತಕರು, ಕೂಡಲೆ ವಿಜಯನಗರಕ್ಕೆ ಐದು ನೂರು ದಿವ್ಯಾಶ್ವ ಗಳನ್ನು ಕಳಿಸಿಕೊಟ್ಟು, ಉಳಿದವನ್ನು ಪೂರೈಸಲು ಕಾಲಾವಧಿ ಕೇಳಿ ಕೊಂಡರು.

ರಾಜಧಾನಿಯ ಅಶ್ವಾಲಯದ ಮುಖ್ಯಾಧಿಕಾರಿ ಓಬಳನಾಯಕ, ಅಶ್ವ ಗಳು ಬಂದಿರುವ ಸಂಗತಿ ಮಹಾಪ್ರಭುಗಳಿಗೆ ಬಿನ್ನವಿಸಲು, ಅವರು ತಮ್ಮ

ನೆಚ್ಚಿನ ಸೇವಕ ಗರುಡನಾಯಕನೊಂದಿಗೆ ಅಶ್ವಪರೀಕ್ಷೆಗೆ ಹೊರಟರು.

ಒಂದೊಂದು ಅಶ್ವವನ್ನೂ ಪರೀಕ್ಷಿಸುತ್ತಾ, ಅವುಗಳ ಗುಣಗಳನ್ನು ಪ್ರಶಂಸಿಸುತ್ತ ಬಂದ ಪ್ರಭುಗಳು, ಒಂದು ಶ್ವೇತಾಶ್ವದ ಮುಂದೆ ಸ್ತಬ್ಧರಾಗಿ ನಿಂತು ಬಿಟ್ಟರು.

ಪ್ರಭುಗಳ ಸ್ತಬ್ಧತೆಯ ಕಾರಣವನ್ನರಿತ ಓಬಲನಾಯಕ,

" ನಿಜಕ್ಕೂ ಇದು ಅಪರೂಪವಸ್ತು – ಮಹಾಪ್ರಭುಗಳು ಸ್ವಂತಕ್ಕೆ ಒಪ್ಪಿಸಿಕೊಳ್ಳಬೇಕು " ಎಂದ.

ಅದನ್ನೇ ಯೋಚಿಸುತ್ತಿದ್ದ ಪ್ರಭುಗಳು,

" ಜೀನು ಹಾಕು ನಾಯಕಾ " ಎಂದರು.

" ಅಶ್ವ ನಾಲ್ಕು ದಿನ ಪಳಗಿದ ಮೇಲೆ ಮಹಾಪ್ರಭುಗಳು ಅದನ್ನೇರುವುದು ಒಳ್ಳೆಯದು."

" ಚಿಂತೆಯಿಲ್ಲ – ನಾವು ನೋಡಿಕೊಳ್ಳುತ್ತೇವೆ."

ಎನ್ನಲು ಓಬಲನಾಯಕ ಜೀನು ಹಾಕಿ, ಪ್ರಭುಗಳಿಗೆ ಅಶ್ವವನ್ನೊಪ್ಪಿಸಿದ.

ಲೀಲಾಜಾಲವಾಗಿ ಅಶ್ವವನ್ನೇರಿ ಪ್ರಭುಗಳು ಕುಳಿತರು. ಗರುಡನಾಯಕನೂ ಕ್ಷಣ ಮಾತ್ರದಲ್ಲಿ ತನ್ನ ಕುದುರೆಯೇರಿ ಕುಳಿತ.

ಪ್ರಭುಗಳ ಅಶ್ವ ಮಹಾವೇಗದಿಂದ ಸಾಗಿ ಅದೃಶ್ಯವಾಯಿತು.

ಗರುಡನಾಯಕ ಬಹಳ ಹಿಂದುಳಿದಿದ್ದುದನ್ನು ಕಂಡು ಪ್ರಭುಗಳು, ತಮ್ಮ ಅಶ್ವದ ಕಡಿವಾಣ ಹಿಡಿದೆಳೆದು ನಿಲ್ಲಿಸಿದರು. ಅವರ ಬಳಿಗೆ ಬಂದ ಗರುಡನಾಯಕ,

" ಅದು ಜಾತಿಮರಿ ಮಹಾಪ್ರಭು, ಕಡಿವಾಣ ಸಡಿಲು ಬಿಡಬೇಡಿ. ತುಂಟ ಕುದುರೆ ತಮ್ಮನ್ನೆಲ್ಲಿಯಾದರೂ ಕೆಡವಿದರೆ ಅನಾಹುತವಾಗುತ್ತದೆ "

ಎಂದು ಬೇಡಿದ.

ಮಹಾಪ್ರಭುಗಳು ನಗುತ್ತಾ ಕಡಿವಾಣ ಸಡಿಲಿಸಲು, ಅಶ್ವ ನಾಗಾಲೋಟದಲ್ಲಿ ಮುಂದೆ ಸಾಗಿತು.

ಅಪರಾಹ್ನದ ವೇಳೆಗೆ ಪ್ರಭು, ಸೇವಕ ಇಬ್ಬರೂ ಬಹಳ ದೂರ ಸಾಗಿ ಬಂದಿದ್ದರು.

ಬಿಸಿಲಿನ ಬೇಗೆಯಿಂದಾಗಿ ಪ್ರಭುಗಳು ಆಪಾದಮಸ್ತಕ ಬೆವರುತ್ತಿದ್ದರು.

ಕುದುರೆಯಿಂದಿಳಿದು ಅದನ್ನು ಒಂದು ಮರಕ್ಕೆ ಬಿಗಿದು ಮಹಾ ಪ್ರಭುಗಳು,

" ಬಹಳ ದೂರ ಬಂದದ್ದಾಯಿತು ನಾಯಕಾ. ಸಮೀಪದಲ್ಲಿ ಎಲ್ಲಿಯಾದರೂ ಕುಡಿಯಲು ನೀರು ಸಿಕ್ಕುವುದೇನು ನೋಡು – ತುಂಬಾ ಬಾಯಾರಿಕೆಯಾಗುತ್ತಿದೆ " ಎಂದರು.

ಅನತಿದೂರದಲ್ಲಿ ಒಂದು ಗುಡಿಸಲು ಕಾಣುತ್ತಿತ್ತು.

ಗುಡಿಸಲ ಬಳಿಗೆ ಹೋದ ಗರುಡ,

" ಯಾರಮ್ಮಾ ಒಳಗೆ " ಎಂದ.

ಒಳಗಿನಿಂದ ಮಧ್ಯ ವಯಸ್ಸಿನ ಒಬ್ಬ ಹೆಂಗಸು ಹೊರಗೆ ಬಂದು,

" ಯಾರು ನೀವು – ಏನು ಬೇಕಾಗಿತ್ತು "

ಎಂದು ಕೇಳಿದಳು.

" ನಾನೂ ನಮ್ಮ ದಣಿಗಳೂ ಕುದುರೆಯೇರಿ ಬಂದೆವು. ಮಾರ್ಗಾಯಾಸದಿಂದ ಬಳಲಿದ್ದೇವೆ. ಕುಡಿಯುವುದಕ್ಕೆ ಸ್ವಲ್ಪ ನೀರು ಬೇಕು."

" ನಾವು ತುಂಬ ಬಡವರು. ನೀರು ಕೊಡಲು ಮನೆಯಲ್ಲಿ ಒಂದು ತುಂಬಿಗೆಯೂ ಇಲ್ಲ. ನಿಮ್ಮ ದಣಿಗಳನ್ನೂ ಇಲ್ಲಿಗೆ ಕರೆತಂದರೆ, ಮಣ್ಣಿನ ಕೊಡದಲ್ಲಿ ನೀರು ಸೇದಿ ಹುಯ್ಯುತ್ತೇನೆ."

" ಹಾಗೇ ಆಗಲಿ "

ಎಂದು ಪ್ರಭುಗಳು ಇದ್ದಲ್ಲಿಗೆ ಬಂದ ಗರುಡನಾಯಕ ಅವರನ್ನು ಗುಡಿಸಲ ಬಳಿ ಕರೆದೊಯ್ದ.

ಹೆಂಗಸು ಮಣ್ಣಿನ ಕೊಡದಲ್ಲಿ ನೀರು ಸೇದಿ, ಪ್ರಭುಗಳ ಕೈ ದೊನ್ನೆಗೆ ನೀರು ಸುರಿದಳು.

ನೀರು ಕುಡಿಯುತ್ತ ಕುಡಿಯುತ್ತ ಪ್ರಭುಗಳ ದೃಷ್ಟಿ ಗುಡಿಸಲಿನೊಳಗೆ ಸುಳಿದ ಮತ್ತೊಬ್ಬ ಸ್ತ್ರೀಯ ಮೇಲೆ ಬಿತ್ತು.

ಪ್ರಭುಗಳ ತೊಯ್ದಿದ್ದ ಕೈಗಳನ್ನು ಒರಸಿಕೊಳ್ಳುತ್ತಾ,

" ತುಂಬ ಉಪಕಾರವಾಯಿತು – ನಿಮ್ಮದು ಯಾವ ಊರು ?"

ಎಂದು ಕೇಳಿದರು.

" ಕೊಂಡಪಲ್ಲಿ."

" ಇಲ್ಲಿಗೇತಕ್ಕೆ ಬಂದಿರಿ ?"

" ಕೊಂಡಪಲ್ಲಿಯನ್ನು ಬಹಮನಿಯ ಸುಲ್ತಾನರು ವಶಪಡಿಸಿಕೊಂಡರು. ಅವರ ಜನಗಳಿಂದ ಕಿರುಕುಳವಾಗಲು, ನಾವು ಕೊಂಡಪಲ್ಲಿ ಬಿಟ್ಟು ಇಲ್ಲಿಗೆ ಬಂದೆವು."

" ಏನು ಕಿರುಕುಳ ಕೊಟ್ಟರು."

" ನನ್ನ ಅತ್ತಿಗೆಯನ್ನು ಬಹಮನಿ ಸುಲ್ತಾನರ ಕಡೆಯವರು ಜನಾನಾಕ್ಕೆ ಸೇರಿಸಲು ಯತ್ನಿಸಿದರು. ಅದರ ಸುಳುಹು ತಿಳಿದಕೂಡಲೆ ನಮ್ಮ ಯಜಮಾನರು, ನಾನು, ಅತ್ತಿಗೆ ಇತ್ತ ವಲಸೆ ಬಂದುಬಿಟ್ಟೆವು."

" ನಿಮ್ಮ ಯಜಮಾನರು ಏನು ಮಾಡುತ್ತಿದ್ದಾರೆ."

" ಏನು ಮಾಡುತ್ತಿದ್ದಾರೋ ಭಗವಂತನೇ ಬಲ್ಲ."

" ಏನೂ ಮಾಡದಿದ್ದರೆ ಜೀವನ ಸಾಗುವುದು ಹೇಗೆ ?"

" ಯಾವಾಗಲಾದರೂ ಮನೆಗಷ್ಟು ದವಸಧಾನ್ಯ ತಂದು ಹಾಕುತ್ತಾರೆ. ಅದರಲ್ಲಿಯೇ ತೃಪ್ತಿಪಟ್ಟುಕೊಳ್ಳಬೇಕಾಗಿದೆ."

" ಅವರ ಹೆಸರೇನು ?"

" ಕೊಂಡಮ ನಾಯಿಡು."

" ನಿಮ್ಮ ಹೆಸರು ?"

" ಅಚ್ಚಮಾಂಬಾ."

" ನಿಮ್ಮ ಅತ್ತಿಗೆಯ ಹೆಸರು ?"

" ಭಾಮಾ."

" ನಾಳೆ ನಿಮ್ಮ ಯಜಮಾನರನ್ನು ರಾಜಧಾನಿಗೆ ಕಳಿಸಿಕೊಡಿ–ಮಹಾಪ್ರಭುಗಳ ಅಂಗರಕ್ಷಕ ಗರುಡನಾಯಕರು ಎಲ್ಲಿದ್ದಾರೆ ಎಂದು ಕೇಳಿದರೆ ಯಾರಾದರೂ ನಾವು ಇರುವ ಸ್ಥಳ ತೋರಿಸುತ್ತಾರೆ."

ಬೆಕ್ಕಸ ಬೆರಗಾದ ಅಚ್ಚಮಾಂಬಾ,

" ನೀವು ಚಕ್ರವರ್ತಿಗಳ ಅಂಗರಕ್ಷಕರೇ "

ಎಂದು ಕೇಳಿದಳು.

" ಹೌದು."

" ಹೇಗಾದರೂ ಮಾಡಿ ನನ್ನ ಮೂರ್ಖ ಗಂಡನಿಗೆ ಒಂದು ಕೆಲಸ ಮಾಡಿಸಿಕೊಟ್ಟು, ಪುಣ್ಯ ಕಟ್ಟಿಕೊಳ್ಳಿ."

" ಆಗಲಿ "

ಎಂದ ಮಹಾಪ್ರಭುಗಳು, ಒಂದು ವರಾಹನನ್ನು ಅವಳ ಕೈಯಲ್ಲಿಟ್ಟು,

" ನಾಳೆ ತಪ್ಪದೆ ನಿಮ್ಮ ಯಜಮಾನರನ್ನು ಕಳಿಸಿಕೊಡಿ "

ಎಂದು ಹೇಳಿ ಗರುಡನಾಯಕ ಗುಡಿಸಲು ಬಳಿಗೇ ತಂದಿದ್ದ ಕುದುರೆಯನ್ನೇರಿ ರಾಜಧಾನಿಯ ಅಭಿಮುಖರಾದರು.

ಒಂದು ದಿನ ಕಳೆಯಿತು.

ಎರಡು ದಿನಗಳು ಕಳೆದವು.

ಗುಡಿಸಲಿನಲ್ಲಿ ಮಹಾಪ್ರಭುಗಳು ಕಂಡಿದ್ದ ಮುಖ, ಪದೇ ಪದೇ ಅವರ ಸ್ಮೃತಿಪಥಕ್ಕೆ ಬಂದು ಕಾಡಲಾರಂಭಿಸಿತು.

ಪ್ರಭುಗಳು ಗರುಡನಾಯಕನನ್ನು ಕರೆದು,

" ಕೊಂಡಮನಾಯಿಡು ಬರಲೇ ಇಲ್ಲವಲ್ಲಾ ನಾಯಕ " ಎಂದರು.

ನಾಯಕ ತಲೆತಗ್ಗಿಸಿ ನಿಂತ.

" ಕತ್ತೆತ್ತಿ ಉತ್ತರ ಹೇಳು "

ಎಂದು ಪ್ರಭುಗಳು ಗದರಲು,

" ಬಂದಿದ್ದ – ಮಹಾಪ್ರಭೂ " ಎಂದ.

ಭದ್ರಾಸನದಿಂದ ಹಾರಿದ ಪ್ರಭುಗಳು,

" ಬಂದಿದ್ದನೇ – ಅವನನ್ನು ನಮ್ಮ ಬಳಿಗೆ ಏಕೆ ಕರೆತರಲಿಲ್ಲ " ಎಂದು ಕೇಳಿದರು.

" ಅವನ ಪೂರ್ವೋತ್ತರ ವಿಚಾರಿಸಿದೆ. ಕೊಂಡಮನಾಯಿಡು ರಾಜಧಾನಿಯ ವೇಶ್ಯಾವಾಟಿಕೆಯಲ್ಲಿ, ದ್ಯೂತಗಾರರೊಂದಿಗೆ ಇರುತ್ತಾನೆ. ದ್ಯೂತವಾಡಿ ಸಂಪಾದಿಸಿದುದನ್ನು ಸುರೆಗೆ ಹಾಕಿಬಿಡುತ್ತಾನೆ. ಈ ನೀಚ ಮನುಷ್ಯನನ್ನು ಸನ್ನಿಧಿಗೆ ಕರೆತರಲು ಮನಸ್ಸು ಒಪ್ಪಲಿಲ್ಲ."

" ನಮ್ಮ ಆಜ್ಞೆ ಪಾಲಿಸುವವಷ್ಟೇ ನಿನ್ನ ಕರ್ತವ್ಯ – ನಿನ್ನ ಸ್ವಬುದ್ಧಿ ನಿನಗೇ ಇರಲಿ – ಈಗಲೇ ಹೋಗಿ, ಕೊಂಡಮನಾಯಿಡು ಎಲ್ಲಿದ್ದರೂ ಇಲ್ಲಿಗೆ

"ಕರೆದುಕೊಂಡು ಬಾ. ಸಂಜೆಯ ಒಳಗಾಗಿ ಅವನನ್ನು ಕರೆತರದಿದ್ದರೆ ನಿನ್ನ ಪರಿಣಾಮ ನೆಟ್ಟಗಾಗುವುದಿಲ್ಲ."

ಎಂದು ಘರ್ಜಿಸಿದರು.

ಕೊಂಡಮನಾಯಿಡುವನ್ನು ಪತ್ತೆ ಹೆಚ್ಚುವುದಕ್ಕೆ ಗರುಡನಾಯಕನಿಗೆ ಶ್ರಮವಾಗಲಿಲ್ಲ. ವೇಶ್ಯಾವಾಟದಲ್ಲಿದ್ದ ರಾಜಮಹೇಂದ್ರಿಯ ಕಣ್ಣಮಾಂಬೆ ಮನೆಯಲ್ಲಿದ್ದ ಕೊಂಡಮನಾಯಿಡುವನ್ನು ಹಿಡಿದು ತಂದು ನಾಯಕ ಮಹಾ ಪ್ರಭುಗಳ ಮುಂದೆ ನಿಲ್ಲಿಸಿದ.

ಗರುಡನಾಯಕನನ್ನು ಹೊರಗೆ ಕಳಿಸಿದ ಮಹಾಪ್ರಭುಗಳು, ಕೊಂಡಮ ನಾಯಿಡುವನ್ನು ಕೂಡ ಹೇಳಿ,

"ಈಗ್ಗೆ ಎರಡು ದಿನಗಳ ಹಿಂದೆ ನಾವು ಆಕಸ್ಮಾತ್ತಾಗಿ ನಿನ್ನ ಮನೆಗೆ ಬಂದಿದ್ದೆವು ನಾಯಿಡು."

"ಗೊತ್ತಾಯಿತು ದೇವರು."

"ನಿನ್ನನ್ನು ಇಲ್ಲಿಗೆ ಕಳಿಸಬೇಕೆಂದು ನಿನ್ನ ಹೆಂಡತಿಗೆ ಹೇಳಿ ಬಂದಿದ್ದೆವು."

"ನಾನು ಬಂದು ಗರುಡನಾಯಕರನ್ನು ಕಂಡೆ – ಅವರು ಯಾವ ವಿಷಯವನ್ನೂ ನನಗೆ ತಿಳಿಸಲಿಲ್ಲ."

"ಹೋಗಲಿ ಬಿಡು – ಅವನೊಬ್ಬ ಮೂರ್ಖ – ನೀವು ಬಹಳ ಕಷ್ಟದಲ್ಲಿದ್ದೀರೆಂದು ತಿಳಿದು ಬಂತು."

"ಬಹಳ ಕಷ್ಟದಲ್ಲಿದ್ದೇವೆ ದೇವರೂ."

"ನಿಮ್ಮ ಕಷ್ಟ ನಾವು ಪರಿಹರಿಸುತ್ತೇವೆ."

"ದೇವರು ಮನಸ್ಸುಮಾಡಿದರೆ ಅದೇನು ದೊಡ್ಡ ವಿಷಯವಿಲ್ಲ."

"ನಿನ್ನ ತಂಗಿಗೆ ವಿವಾಹವಾಗಿದೆಯೇ ?"

"ಇಲ್ಲ."

"ಅವಳ ರೂಪ ಕಂಡು ನಾವು..........."

ಹಸಿದ ಹುಲಿ ತನ್ನ ಬೇಟೆಯನ್ನು ನೋಡುವಂತೆ ಕೊಂಡಮನಾಯಿಡು ಮಹಾಪ್ರಭುಗಳನ್ನೇ ಎವೆಯಿಕ್ಕದೆ ನೋಡುತ್ತ ನಿಂತ.

"ನೀವು ಇಲ್ಲಿಗೆ ಬಂದು, ಸುಖವಾಗಿರಲು ತಕ್ಕ ವ್ಯವಸ್ಥೆ ಮಾಡು ತ್ತೇವೆ."

"ಸಂತೋಷ."

"ನಿನ್ನ ತಂಗಿಯನ್ನು ನೋಡಲು ನಮಗೆ ಅಪೇಕ್ಷೆಯಾಗಿದೆ."

"ಅವಳನ್ನು ಕೇಳಿ ನೋಡಬೇಕು."

"ನಿನ್ನ ಮಾತಿಗೆ ಅವಳು ಪ್ರತಿ ಹೇಳುವಳೇ?"

"ಇಲ್ಲ."

"ಹಾಗಾದರೆ ಈಗಲೇ ಹೋಗಿ ಅವಳನ್ನು ಕರೆದುಕೊಂಡು ಬಾ. ನಾವು ವಸಂತೋದ್ಯಾನದಲ್ಲಿರುತ್ತೇವೆ."

"ನನ್ನ ಅರಿಕೆ ಪರಾಂಬರಿಸಬೇಕು."

"

"ಭಾಮೆಯೇ ನನ್ನ ಆಸ್ತಿ – ಅವಳನ್ನು ತಾವು ಅಂತಃಪುರ ಸೇರಿಸಿ ಕೊಂಡು ಬಿಟ್ಟರೆ........"

"ನಿನ್ನ ಮತ್ತು ನಿನ್ನ ಹೆಂಡತಿಯ ಜೀವನ ವ್ಯವಸ್ಥೆ ಮಾಡುವುದಾಗಿ ಹೇಳಿದೆವಲ್ಲಾ!"

"ಅಷ್ಟೇ ಸಾಲದು."

"ಇನ್ನೇನಾಗಬೇಕು."

"ನಮ್ಮ ಮನೆಗೆ ಭಾಮಾ ಧಾರಾಳವಾಗಿ ಬಂದು ಹೋಗುವುದಕ್ಕೆ, ಅವಳ ಮನೆಗೆ ನಾವು ಬಂದು ಹೋಗುವುದಕ್ಕೆ ಅವಕಾಶವಿರಬೇಕು."

"ಆಗಬಹುದು."

"ಅರಮನೆಯಲ್ಲಿ ನನಗೊಂದು ಉದ್ಯೋಗ ಅಪ್ಪಣೆಯಾಗಬೇಕು."

"ಕೊಂಡಪಲ್ಲಿಯಲ್ಲಿ ನೀನು ಯಾವ ಉದ್ಯೋಗ ಮಾಡುತ್ತಿದ್ದೆ."

"ವೀಧಿ ನಾಟಕ ಆಡಿಸುತ್ತಿದ್ದೆ."

"ಒಳ್ಳೆಯದು – ಅರಮನೆಯ 'ವಿನೋದ ಖಾತೆ'ಯ ಮೊಖ್ತೇಸರ ಹುದ್ದೆ ನಿನಗೆ ಕೊಡುತ್ತೇವೆ."

"ನನಗೊಂದು ಒಳ್ಳೆಯ ಮನೆ, ಸೇವಕರು, ಅಶ್ವ, ರಥ ಇರಬೇಕು."

"ಅದೂ ಆಗಬಹುದು – ಇನ್ನೇನು?"

" ಇನ್ನೇನೂ ಇಲ್ಲ – ದೇವರ ಸನ್ನಿಧಿಗೆ ಬರಲು ಅಮ್ಮಯ್ಯನಿಗೆ ಯೋಗ್ಯವಾದ ಒಡವೆ ವಸ್ತುಗಳಿಲ್ಲ."

" ಒಳ್ಳೆಯದು."

ಎಂದು ಮಹಾಪ್ರಭುಗಳು ಕೈಚಪ್ಪಾಳೆ ತಟ್ಟಲು ಗರುಡನಾಯಕ ಬಂದು ಎದುರು ನಿಂತ.

"ಕೊಂಡಮನಾಯಿಡುವನ್ನು ಒಳಗೆ ಕರೆದೊಯ್ದು, ಅವನು ಅಪೇಕ್ಷಿಸುವ ಒಡವೆ ವಸ್ತುಗಳನ್ನು ಕೊಡಿಸು – ನಾವು ವಸಂತೋದ್ಯಾನದಲ್ಲಿರುತ್ತೇವೆ. ನೀನು ನಾಯಿಡು ಜತೆಯಲ್ಲಿ ಹೋಗಿ, ಅವನೊಂದಿಗೆ ಉದ್ಯಾನ ಮಂದಿರದಲ್ಲಿ, ನಮ್ಮನ್ನು ಬಂದು ಕಾಣಬೇಕು."

ಎಂದು ಹೇಳಿದ ಗರುಡನಾಯಕ, ನಾಯಿಡುವನ್ನು ಕರೆದುಕೊಂಡು ಒಳಗೆ ಹೋದ.

# ೨೮

ಸುರತ ವಿದ್ಯಾವಿಶಾರದೆಯಾಗಿದ್ದ ಭಾಮೆಯ ಮೋಹಪಾಶಗಳಿಂದ ಇಮ್ಮಡಿ ನರಸಿಂಹರಾಯರು ಬಂಧಿತರಾಗಲು ಬಹಳ ಕಾಲ ಹಿಡಿಯಲಿಲ್ಲ.

ಅವಳನ್ನು 'ವಸಂತೋದ್ಯಾನ ಮಂದಿರ'ದಲ್ಲೇ ಸ್ಥಾಪಿಸಿದ ಮಹಾಪ್ರಭುಗಳು, ರಾಜ್ಯಕಾರ್ಯವನ್ನುಪೇಕ್ಷಿಸಿದುದಲ್ಲದೆ, ರಾಣೀವಾಸವನ್ನೂ ಉಪೇಕ್ಷಿಸಿಬಿಟ್ಟರು. ಅವರ ಭೋಜನ, ವಿಶ್ರಾಂತಿಯೆಲ್ಲವೂ ವಸಂತೋದ್ಯಾನದಲ್ಲೇ ಕಳೆದು ಹೋಗುತ್ತಿತ್ತು.

ಭಾಮೆ ಅನುಪಮಸುಂದರಿಯೆನ್ನುವುದಕ್ಕೆ ಪ್ರತ್ಯವಾಯವಿರಲಿಲ್ಲ. ಹಿಮ್ಮಡಿ ಮುಟ್ಟುತ್ತಿದ್ದ ಅವಳ ದಟ್ಟವಾದ ಕೇಶರಾಶಿ ಕಾಳ ಸಮುದ್ರವನ್ನು ಅಣಕಿಸುತ್ತಿತ್ತು. ಬೃಹದ್ಗೋಲಗಳಂತಿದ್ದ ನಿತಂಬಗಳು, ಪೂರ್ಣ ಕುಂಭಗಳಂತಿದ್ದ ಕುಚಗಳು ಅವಳ ಸೌಂದರ್ಯದ ವಿಜಯಧ್ವಜಗಳಂತಿದ್ದವು. ಅವಳ ಮೈ, ಅದೇ ಕಡೆದ ಬೆಣ್ಣೆಯಂತೆ ಮೃದುವಾಗಿತ್ತು. ನಸುಗೆಂಪು ಬೆರೆತ ಅವಳ ಮೈಬಣ್ಣ ಮಾದಕವಾಗಿತ್ತು.

ಮಹಾಪ್ರಭುಗಳ ಸೇವಾಶುಶ್ರೂಷೆಯೆಲ್ಲವೂ ಭಾಮೆಯದಾಗಿತ್ತು. ಅವರಿಗೆ ಮಜ್ಜನ ಮಾಡಿಸುವುದು, ಆರೋಗಣೆ ನೀಡುವುದು, ಭಾಮೆಗೆ ಅತ್ಯಂತ ಪ್ರಿಯವಾಗಿತ್ತು.

ಕೊಂಡಮನಾಯಿಡುವಿಗೆ ಮಹಾಪ್ರಭುಗಳಿತ್ತಿದ್ದ ಆಶ್ವಾಸನ ಪೂರೈಸಿದರು. ಭವ್ಯವಾದ ಮಹಲಿನಲ್ಲಿ ಪ್ರತಿಷ್ಠಾಪಿತನಾದ ನಾಯಿಡು, ತನ್ನ ವೈಭವ ಮೆರೆಸುವುದಕ್ಕೆ ಎಳ್ಳಷ್ಟೂ ಸಂಕೋಚಪಡಲಿಲ್ಲ.

ತಾನು ಪ್ರಭುಗಳ 'ಭಾವಮೈದುನ'ನೆಂದು ಸಾರಿಕೊಳ್ಳುತ್ತಾ ಕೊಂಡಮನಾಯಿಡು, ರಾಜಧಾನಿಯ ವರ್ತಕರು, ಅಧಿಕಾರಿಗಳನ್ನು ಹೆದರಿಸಿ ಕೊಳ್ಳುತ್ತಿದ್ದ.

ಕೊಂಡಮನಾಯಿಡು ಪರಿಸ್ಥಿತಿ ಮದ್ಯಪಾನ ಮಾಡಿದ ಕಪಿಯಂತಾಗಿತ್ತು. ಸಂಪಾದನೆಗೆ ಒಂದು ಶಾಶ್ವತ ಮಾರ್ಗ ಅರಸುತ್ತಿದ್ದ ನಾಯಿಡುವಿಗೆ

ಅರಮನೆಗೆ ಸಮಸ್ತ ಪದಾರ್ಥಗಳನ್ನೊದಗಿಸುವ ಹೊಣಗಾರಿಕೆಯನ್ನು ಮಹಾಪ್ರಭುಗಳು ಒಪ್ಪಿಸಿದರು.

ರಾಜಧಾನಿಯಲ್ಲಿ ಮಹಾಪ್ರಭುಗಳ ತರುವಾಯ ಪ್ರಧಾನವ್ಯಕ್ತಿಯೆಂದರೆ ಕೊಂಡಮನಾಯಿಡು. ಬೆಳಿಗ್ಗೆಯಿಂದ ಸಂಜೆಯವರೆಗೆ ಅಶನಾರ್ಥಿಗಳು, ಉದ್ಯೋಗ ಅಪೇಕ್ಷಕರು, ಸಂಬಳ ಸಾರಿಕೆಗಳಲ್ಲಿ ಪ್ರಗತಿ ಬಯಸುತ್ತಿದ್ದವರು, ಜೋತಿಷ್ಕರು, ವೈದ್ಯರು, ಗಮಕಿಗಳು, ಲಲಿತಕಲಾಕೋವಿದರು, ಕವಿಗಳು ಅವನ ಮನೆ ಬಾಗಿಲು ಕಾಯುತ್ತಿದ್ದರು.

ತೆಲಂಗಾಣದಿಂದ ತಂಡೋಪತಂಡವಾಗಿ ಬರುತ್ತಿದ್ದ ಜನರಿಗೆ ಕೊಂಡಮ ನಾಯಿಡು ಆಶ್ರಯದಾತನಾದ. ಕೆಲವು ಆಳಿಗವಿಗಳು ಕೊಂಡಮನಾಯಿಡು ಮೇಲೆ ಕಾವ್ಯ, ಪುರಾಣಗಳನ್ನು ಬರೆದು ಅವನನ್ನು ಇಂದ್ರ, ಮಾಂಧಾತಾ, ಶಿಬಿ, ಕರ್ಣರಿಗೆ ಹೋಲಿಸಿದ್ದರು.

ರಾಯಭಂಡಾರಿ ಮಂಗರಸರ ಕಾರ್ಯಾಲಯದ ತುಂಬ ಕೊಂಡಮ ನಾಯಿಡು ಕೊಟ್ಟಿದ್ದ ಹುಂಡಿಗಳು ತುಂಬಿದವು. ನಟ, ವಿಟ, ಗಾಯಕರಿಗೂ, ಗಣಿಕೆ, ಪೀಠಮರ್ಧನರಿಗೂ ಅವನು ಕೊಡುತ್ತಿದ್ದ ಹುಂಡಿಗಳು, ದಾನದತ್ತಿ ಗಳಿಂದ ಭಂಡಾರ ಬರಿದಾಗುತ್ತ ಬಂತು.

ಭಂಡಾರ ಬರಿದಾಗದಂತೆ ನೋಡಿಕೊಳ್ಳುವ ಜವಾಬುದಾರಿ ಹೊತ್ತಿದ್ದ ಮಂಗರಸರು, ಸಾಮಂತರ ಮೇಲೆ ಹೆಚ್ಚಿನ ಕಪ್ಪಕಾಣಿಕೆಗಳನ್ನು ಹೇರಿದ್ದಲ್ಲದೆ, ಜನತೆಯ ಮೇಲೆ ಹೊಸ ಹೊಸ ಕರಗಳನ್ನು ವಿಧಿಸುತ್ತ ಬಂದರು.

ಎಲ್ಲೆಲ್ಲಿಯೂ ಅತೃಪ್ತಿ, ಅಶಾಂತಿಯ ಹೊಗೆಯಾಡಲಾರಂಭಿಸಿತು.

ಪರಿಸ್ಥಿತಿ ವಿಕೋಪಕ್ಕೆ ಹೋಗುತ್ತಿದ್ದುದನ್ನು ಗಮನಿಸಿದ ನಾಗನಾಯ ಕರು ಒಂದು ದಿನ ಪ್ರಧಾನ ಮಂತ್ರಿಗಳಾದ ನರಸನಾಯಕರನ್ನು ಕಂಡು,

" ಮಹಾಪ್ರಭುಗಳುಗಂತೂ, ಜನರ ಕಷ್ಟಸುಖ ಬೇಡವಾಗಿದೆ. ಮಹಾಪ್ರಧಾನಿಗಳೂ ಅದೇ ನೀತಿಯನ್ನು ಅನುಸರಿಸುತ್ತಿರುವರೇ ?" ಎಂದು ಕೇಳಿದರು.

" ಜನತೆಯ ಕಷ್ಟಸುಖ ನಾನು ಉಪೇಕ್ಷಿಸುತ್ತಿದ್ದೇನೆಂದು ನಿಮಗೆ ಹೇಳಿದವರು ಯಾರು ?"

" ಕೈಹುಣ್ಣಿಗೆ ಕನ್ನಡಿಯೇಕೆ ನರಸನಾಯಕರೇ. ಸಾಮ್ರಾಜ್ಯಾಧೀಶರು

ಇಮ್ಮಡಿ ನರಸಿಂಹರಾಯರೋ, ಕೊಂಡಪಲ್ಲಿ ಕೊಂಡಮನಾಯಿಡುವೋ ಎಂದು ನನಗೇ ಅನುಮಾನ ಬಂದಿದೆ. ವೇಶ್ಯಾವಾಟಗಳಲ್ಲಿ ತಿರಿದುಣ್ಣುತ್ತಿದ್ದ ಈ ಹುಲುಪ್ರಾಣಿಯ ಕೈಯಲ್ಲಿ ಸಾಮ್ರಾಜ್ಯಸೂತ್ರಗಳು ಸಿಕ್ಕಿರುವುದು ನಿಮ್ಮ ಗಮನಕ್ಕೆ ಬಂದಿದೆಯೇ ?"

"ಬಂದಿದೆ ನಾಯಕರೇ – ನಾನೇನು ಮಾಡಲು ಸಾಧ್ಯ ನೀವೇ ಹೇಳಿ. ಪ್ರಭುಗಳ ದರ್ಶನ ದೊರೆಯುವುದೇ ದುರ್ಲಭವಾಗಿದೆ. ಕೊಂಡಮನಾಯಿಡು ಹೇಳಿದ್ದಕ್ಕೆಲ್ಲಾ ಪ್ರಭುಗಳು 'ಅಸ್ತು' ಎನ್ನುತ್ತಾರೆ. ಈ ಪರಿಸ್ಥಿತಿಯನ್ನೆದುರಿಸುವುದು ಹೇಗೆ ಎನ್ನುವುದೇ ನನಗೊಂದು ಸಮಸ್ಯೆಯಾಗಿದೆ."

"ಕೊಂಡಮನಾಯಿಡು ಹುಟ್ಟಡಗಿಸದಿದ್ದರೆ ಅವನಿಂದಲೇ ಸಾಮ್ರಾಜ್ಯ ಕೊನೆಗಾಣುತ್ತದೆ. ವಿಜಯನಗರದ ಅಳಿವು – ಉಳಿವು ಈಗ ನಿಮ್ಮನ್ನವಲಂಬಿಸಿದೆ. ನೀವು ಧೀರಪ್ರಯತ್ನ ಕೈಗೊಳ್ಳದಿದ್ದರೆ ನಾನು ಮಂತ್ರಿತ್ವ ಬಿಟ್ಟುಗೊಟ್ಟು ಬಂಡಾಯವನ್ನೆಬ್ಬಿಸಬೇಕಾಗುತ್ತದೆ. ಕೊಂಡಮನಾಯಿಡುವಿನ ದಾಹಪೂರೈಕೆಗಾಗಿ ವಿಧಿಸಲ್ಪಡುತ್ತಿದ್ದ ಕರಭಾರದಿಂದ ಜನ ಕಂಗೆಟ್ಟು ಹೋಗಿದ್ದಾರೆ."

"ಪ್ರಭುಗಳನ್ನು ಸನ್ಮಾರ್ಗಕ್ಕೆ ತಿರುಗಿಸಲು ಸಾಧ್ಯವಿಲ್ಲವೇ ?"

"ಭಾಮಾಲೋಕ ಸೇರಿರುವ ಪ್ರಭುಗಳಿಗೆ ಮೈಮೇಲೆ ಪ್ರಜ್ಞೆಯಿದೆಯೇ ?"

"ಶ್ರೀಗುರು ವ್ಯಾಸತೀರ್ಥರೊಂದಿಗೆ ಈ ವಿಷಯ ನಾವು ಪ್ರಸ್ತಾಪಿಸಬೇಕು."

"ಪ್ರಸ್ತಾಪಿಸಿಯಾಯಿತು – ಅವರೂ ಪ್ರಯತ್ನಿಸಿದರು – ಸಾರ್ಥಕವಾಗಲಿಲ್ಲ – ಗುರುದೇವರು ಬೇಸತ್ತು 'ಪ್ರಭುಗಳ ಕರ್ಮಕ್ಕೆ ಯಾರು ಹೊಣೆ. ರಾಜ್ಯಕ್ಕೆ ಬರಲಿರುವ ಘೋರ ವಿಪತ್ತನ್ನು ಎದುರಿಸಲು ನೀವು ಸಿದ್ಧರಾಗಬೇಕು.' ಎಂದು ಕಾಶಿ, ಕೇದಾರ ಯಾತ್ರೆ ಹೋಗಲು ಸಿದ್ಧರಾಗುತ್ತಿದ್ದಾರೆ."

"ಸಾಳುವವಂಶ ಇಮ್ಮಡಿ ನರಸಿಂಹರಾಯರ ಕಾಲಕ್ಕೆ ಮುಗಿದು ಹೋಗುತ್ತದೆಂದು ಕಾಣುತ್ತದೆ. – ಭುವನೇಶ್ವರಿಯ ಇಚ್ಛೆಯಿದ್ದಂತಾಗಲಿ – ಚತುರೋಪಾಯಗಳನ್ನೂ ಪ್ರಯೋಗಿಸಿ, ಪರಿಸ್ಥಿತಿ ಸುಧಾರಿಸುವೆನೆಂದು

ನಿಮಗೆ ಆಶ್ವಾಸನಕೊಡುತ್ತೇನೆ. ಮಹಾಪ್ರಭುಗಳಿಗೆ ಸ್ವಲ್ಪವೂ ಅನುಮಾನ ಬರದಂತೆ ನಾವುಗಳು ಈಗ ವರ್ತಿಸಬೇಕಾದುದು ಅತ್ಯವಶ್ಯಕ. – ಕೆಲವು ದಿನ ನಾನು ಪೆನುಕೊಂಡೆಗೆ ಹೋಗಿ ಬರಬೇಕಾಗಿದೆ. ನಾನು ಬರುವವರೆಗೆ ನೀವು ರಾಜ್ಯಾಧಿಕಾರ ವಹಿಸಿಕೊಳ್ಳಿ. ಕೊಂಡಮನಾಯಿಡುವನ್ನು ಪ್ರೀತ್ಯಭಿಮಾನ ಗಳಿಂದಲೇ ಕಾಣುತ್ತೀರಿ."

" ಆಗಬಹುದು "

ಎಂದು ನಾಗನಾಯಕರು ಒಪ್ಪಿಗೆ ಸೂಚಿಸಿದರು.

ಪೆನುಕೊಂಡೆಗೆ ಪ್ರಯಾಣ ಬೆಳಸಿದ ನರಸನಾಯಕ, ಎರಡು ತಿಂಗಳ ತರುವಾಯ ಹಿಂದಿರುಗಿ ನಾಗನಾಯಕ, ಮಂಗರಸ, ತುಳುಕಣ್ಣ ನಾಯಕ ರನ್ನು ಬರಮಾಡಿಕೊಂಡು,

" ರಂಗ ಸಿದ್ಧವಾಗಿದೆ. ಪಾತ್ರಧಾರಿಗಳು ಪ್ರವೇಶ ಮಾಡುವದಷ್ಟೇ ಉಳಿದಿರುವುದು."

ಎಂದು ತಿಳಿಸಿದರು.

ತಮ್ಮ ವಿಲಾಸ ವೈಭವದಲ್ಲಿ ಮೈಮರೆತು ಕುಳಿತಿದ್ದ ಮಹಾಪ್ರಭುಗಳು ಬಳಿಗೆ ಬಂದ ಗರುಡನಾಯಕ, ಮೆಲ್ಲನೆ,

" ಮಹಾಪ್ರಭೂ........" ಎಂದ.

ಅರ್ಧನಿಮೀಲಿತರಾಗಿದ್ದ ಪ್ರಭುಗಳು ಅವನತ್ತ ದೃಷ್ಟಿ ಹೊರಳಿಸಿ,

" ಏನು ಗರುಡಾ. – " ಎಂದರು,

" ಮೂರು ದಿನಗಳಿಂದ ಒಂದೇ ಸಮನಾಗಿ ಮಹಾಪ್ರಧಾನಿ ನರಸ ನಾಯಕರು ತಮ್ಮ ದರ್ಶನ ಅಪೇಕ್ಷಿಸುತ್ತಿದ್ದಾರೆ. ಈ ಹೊತ್ತು ತಮ್ಮನ್ನು ಕಾಣಲೇಬೇಕಂತೆ !"

" ವ್ಯವಧಾನ ಇಲ್ಲವೆಂದು ಹೇಳಿ ಕಳಿಸೋ ಗರುಡ."

" ಹಾಗನ್ನಬಾರದು ನನ್ನೊಡೆಯಾ – ತುಂಬ ಅವಸರದ ಕೆಲಸವಿಲ್ಲ ದಿದ್ದರೆ ಮಹಾಪ್ರಧಾನಿಗಳು ಇಷ್ಟು ಒತ್ತಾಯ ಮಾಡುತ್ತಿರಲಿಲ್ಲ."

" ಆಗಲಿ – ಸಂಜೆಗೆ ಅವರನ್ನು ಇಲ್ಲೇ ಬರಮಾಡು " ಎಂದರು.

ವಸಂತೋದ್ಯಾನದ ಲತಾಮಂಟಪದಲ್ಲಿ ಕುಳಿತಿದ್ದ ಮಹಾಪ್ರಭುಗಳನ್ನು ಕಂಡ ನರಸನಾಯಕರು, ಯಥೋಚಿತ ಗೌರವ ಸಲ್ಲಿಸಿ,

" ಪೆನುಕೊಂಡೆಯಿಂದ ನಾನು ಹಿಂದಿರುಗಿ ಮೂರು ದಿವಸಗಳಾದವು. ಬಂದಂದಿನಿಂದಲೂ ಮಹಾಪ್ರಭುಗಳ ದರ್ಶನಕ್ಕೆ ಕಾಯುತ್ತಿದ್ದೇನೆ."

" ಏನು, ವಿಶೇಷ ? ನಿಮ್ಮ ಪೆನುಕೊಂಡೆಯ ಪ್ರವಾಸ ಯಶಸ್ವಿಯಾಯಿತೇ ?"

" ಆಯಿತು – ಪುರಾತನ ಶ್ರೀ ಲಕ್ಷ್ಮೀನಾರಾಯಣ ದೇವಾಲಯ ಶಿಥಿಲವಾಗಿ, ಮುರಿದು ಬೀಳುತ್ತಿತ್ತು. ಅದನ್ನು ಜೀರ್ಣೋದ್ಧಾರ ಮಾಡಿಸಿ ಬಂದೆ."

" ಬಹಳ ಸಂತೋಷ."

" ಚೈತ್ರಮಾಸದಲ್ಲಿ ಅಲ್ಲಿ ದೊಡ್ಡ ಜಾತ್ರೆ ಸೇರುತ್ತದೆ. ಆ ಕಾಲಕ್ಕೆ ದೇವಸ್ಥಾನದ ಅನಾವರಣ ಮಹೋತ್ಸವ ತಮ್ಮ ಅಮೃತಹಸ್ತದಿಂದ ನೆರವೇರಬೇಕೆಂದು ಪ್ರಜಾಜನರು ಕಾತರರಾಗಿದ್ದಾರೆ."

" ನಾವೆಲ್ಲಿ ಬರುವುದಕ್ಕಾಗುತ್ತದೆ ನರಸನಾಯಕರೇ."

" ತಮ್ಮಿಂದಲೇ ಈ ಶುಭಕಾರ್ಯ ನೆರವೇರಬೇಕೆಂಬ ನನ್ನ ಅಪೇಕ್ಷೆಯೂ ಆಗಿದೆ. ಲಕ್ಷ್ಮೀನಾರಾಯಣ ನಮ್ಮ ಮನೆದೇವರು – ತಮ್ಮಿಂದಲೇ ಈ ಕೆಲಸ ನಡೆಯಬೇಕೆಂದು ನಾನು ಸಂಕಲ್ಪ ಮಾಡಿದ್ದೆ. ಅಲ್ಲದೆ........"

" ಮತ್ತೇನು ?"

"ಧರ್ಮಪ್ರಭುಗಳಾದ ತಾವು ಪ್ರಜಾವರ್ಗದಿಂದ ಹೀಗೆ ದೂರ ನಿಲ್ಲುವುದು ಸರಿಯಲ್ಲ. ಆಗಾಗ್ಗೆ ತಾವು ಪ್ರಜೆಗಳಿಗೆ ದರ್ಶನವೀಯಬೇಕು."

" ನಿಮ್ಮಂಥ ದಕ್ಷರು – ರಾಜ್ಯಸೇವಾಧುರೀಣರು ಮಹಾಪ್ರಧಾನಿಗಳಾಗಿರುವಾಗ ನಮಗೆ ಏತರ ಭಯವೂ ಇಲ್ಲ."

" ನನ್ನ ಮೇಲೆ ತಾವು ಇಟ್ಟಿರುವ ವಿಶ್ವಾಸಕ್ಕೆ ನಾನು ಋಣಿಯಾಗಿದ್ದೇನೆ. ಆ ವಿಶ್ವಾಸದ ಕುರುಹಾಗಿ ತಾವು ಪೆನುಕೊಂಡೆಗೆ ದಯಮಾಡಿಸಬೇಕೆಂದು ಕೈಜೋಡಿಸಿ ಬೇಡಿಕೊಳ್ಳುತ್ತೇನೆ."

ಮಹಾಪ್ರಭುಗಳು ಯೋಚಿಸಿ,

" ಒಂದೆರಡು ದಿನಗಳಲ್ಲಿ ನಾವು ಪೆನುಕೊಂಡೆಯಿಂದ ಹಿಂದಿರುಗಬಹುದಷ್ಟೆ."

" ಅಗತ್ಯವಾಗಿ ಆಗಲಿ."

" ಒಳ್ಳೆಯದು – ನಾವು ಬರುತ್ತೇವೆ ನರಸನಾಯಕರೇ.

ಎಂದು ಮಹಾಪ್ರಭುಗಳು ಸಮ್ಮತಿ ಸೂಚಿಸಿದರು.

ಮಹಾಪ್ರಭುಗಳ ಬಿಡಾರ, ಪೆನುಕೊಂಡೆಯ ಅರಮನೆಯಲ್ಲಿ ಸಜ್ಜುಗೊಳಿಸಲಾಗಿತ್ತು.

ಸಕಲ ಪರಿವಾರದೊಂದಿಗೆ ಪೆನುಕೊಂಡೆಗೆ ಬಿಜಯ ಮಾಡಿದ ಮಹಾಪ್ರಭುಗಳು, ಮಹಾರಾಣಿ ಚಿನ್ನಾದೇವಿಯವರು ರಾಜಕುಮಾರರು, ನರಸಿಂಹ, ದೇಪ್ಪನವರನ್ನು ನರಸನಾಯಕರೂ, ದೇವಾಲಯದ ಅಧಿಕಾರಿಗಳೂ, ಸೈನ್ಯದ ದಣ್ಣಾಯಕರೂ ಸ್ವಾಗತಿಸಿ, ಮೆರವಣಿಗೆ ಮಾಡಿಸಿಕೊಂಡು ರಾಜಬಿಡಾರಕ್ಕೆ ಕರೆತಂದರು.

ಅದೇ ದಿನ ಪ್ರಭುಗಳ ಸಮ್ಮುಖದಲ್ಲಿ ಮಹಾಪೂಜೆ ನೆರವೇರಿತು.

ಪ್ರಭುಗಳು ದೇವಾಲಯವನ್ನು ಉದ್ಘಾಟಿಸಿ, ಅದಕ್ಕೆ ಪೆನುಕೊಂಡೆಯ ಸುತ್ತಮುತ್ತಲಿದ್ದ ನಾಲ್ಕು ಹಳ್ಳಿಗಳನ್ನು ದತ್ತಿಕೊಟ್ಟರು.

ಮಾರನೆಯ ದಿನ ರಾಜಧಾನಿಗೆ ಹಿಂದಿರುಗುವ ಇಚ್ಛೆಯನ್ನು ಮಹಾಪ್ರಭುಗಳು ವ್ಯಕ್ತ ಮಾಡಲು, ನರಸನಾಯಕರು,

" ನಾನು ವಚನಭಂಗಮಾಡಬೇಕಾದ ಪ್ರಸಂಗ ಒದಗಿದೆ – ಅದಕ್ಕೆ ತಾವು ಕ್ಷಮಿಸಬೇಕು " ಎಂದರು.

" ವಚನಭಂಗವೇಕಾಗಬೇಕು."

" ತಾವು ಪೆನುಕೊಂಡೆಯಲ್ಲೇ ಇನ್ನೂ ಕೆಲವು ದಿನ ಇರಬೇಕೆಂದು ನನ್ನ ಇಚ್ಛೆ."

ಮಹಾಪ್ರಭುಗಳ ಮುಖ ವಿವರ್ಣ ತಳೆಯಿತು. ಉಕ್ಕಿಬಂದ ಕೋಪವನ್ನು ತಡೆಗಟ್ಟಿ,

" ನಾವು ಪೆನುಕೊಂಡೆಯಲ್ಲಿರಬೇಕು – ಏಕೆ ?"

" ರಾಜಧಾನಿಯ ವಾತಾವರಣ ತಮಗೆ ಅನುಕೂಲವಾಗಿಲ್ಲ."

" ಮೋಸ ! – ನೀವೂ ಮೋಸಗಾರರಾಗುತ್ತೀರೆಂದು ನಾವು ಭಾವಿಸಿರಲಿಲ್ಲ ನರಸನಾಯಕರೇ "

" ಸಾಮ್ರಾಜ್ಯ ಹಿತಸಂರಕ್ಷಣೆಯ ಸಲುವಾಗಿ ನಾನು ಮೋಸಗಾರನೂ ಆಗಬೇಕಾಗಿದೆ – ಕೊಲೆಪಾತಕಿಯೂ ಆಗಬೇಕಾಗಿದೆ."

" ಸಾಮ್ರಾಜ್ಯದ ಹಿತಸಂರಕ್ಷಣೆಗೆ ನಮ್ಮಿಂದ ಅಡಚಣೆ ಆಗಿದೆಯೇ ?"

" ಆಗಿದೆ – ತಮ್ಮ ವಿಲಾಸಜೀವನದ ಶೈಲಿ ಸಹಿಸಲಾಗದೆ ಜನ ತತ್ತರಿಸಿದ್ದಾರೆ. ವಿಜಯನಗರ ಸಾಮ್ರಾಜ್ಯವಾಳುತ್ತಿರುವವರು ಶ್ರೀ ನರಸಿಂಹ ರಾಯರಲ್ಲ – ಕೊಂಡಪಲ್ಲಿ ಕೊಂಡಮನಾಯಿಡು ಎಂದು ಜನ ಆಡಿಕೊಳ್ಳು ತ್ತಿದ್ದಾರೆ. ಅನೇಕ ಸಲ ನಿಮಗೆ ಎಚ್ಚರಿಕೆ ಕೊಡಲಾಯಿತು – ನೀವು ಲಕ್ಷಿಸಲಿಲ್ಲ. ಭಗವಾನ್ ವ್ಯಾಸತೀರ್ಥರು ನಿಮಗೆ ಬುದ್ಧಿ ಹೇಳಿದರು. ಅವರ ಮಾತನ್ನು ಕಡೆಗಾಣಿಸಿದಿರಿ. ಗುರುದೇವರು ಬೇಸತ್ತು ಕಾಶೀಯಾತ್ರೆ ಹೊರಟುಹೋದರು. ಒಬ್ಬ ಕೀಳು ಗಣಿಕೆಗಾಗಿ ತಾವು ಸಾಮ್ರಾಜ್ಯವನ್ನೇ ಬಲಿಗೊಡಲು ಸಿದ್ಧವಾಗಿರಬಹುದು – ನಾವು ಸಿದ್ಧವಾಗಿಲ್ಲ. ವಿಜಯನಗರ ಸಾಮ್ರಾಜ್ಯ ಸಿಂಹಾಸನವನ್ನಲಂಕರಿಸಲು ತಾವು ಅಸಮರ್ಥರಾಗಿದ್ದೀರಿ. ನಿಮ್ಮ ಶೇಷಾಯುಷ್ಯವನ್ನು ಸುಖವಾಗಿ ಕಳೆಯಲು ನಾನು ಪೆನುಕೊಂಡೆಯಲ್ಲಿ ಎಲ್ಲ ವ್ಯವಸ್ಥೆಮಾಡಿದ್ದೇನೆ – ಇಲ್ಲಿಂದ ತಪ್ಪಿಸಿಕೊಳ್ಳುವ ಪ್ರಯತ್ನ ಮಾತ್ರ ಮಾಡಬೇಡಿ."

ರೋಷತಪ್ತರಾದ ಮಹಾಪ್ರಭುಗಳು,

" ಒಮ್ಮೆ ನಾವು ವಿಜಯನಗರಕ್ಕೆ ಬಂದು ನಮ್ಮ ಪ್ರಜೆಗಳ ಮುಖಾ ಮುಖಿಯಾಗಿ ನಿಲ್ಲುವ ಅವಕಾಶ ಕಲ್ಪಿಸುವಿರಾ ನಾಯಕರೇ ?"

" ಏಕೆ ?"

" ನಿಮ್ಮ ದುರಭಿಸಂಧಿಯನ್ನು ಪ್ರಜಾವರ್ಗಕ್ಕೆ ತಿಳಿಸುತ್ತೇವೆ."

" ಪರಿಣಾಮ ಏನಾಗುತ್ತದೆ ಬಲ್ಲಿರಾ ?"

" ಏನಾಗುತ್ತದೆ "

" ನಿಮ್ಮ ಕೊಂಡಮನಾಯಿಡು ಭಂಡಾರ ಬರಿದು ಮಾಡಿದ್ದಾನೆ. ಅದನ್ನು ತುಂಬಲು ರಾಯಭಂಡಾರಿಗಳು ಕರಗಳ ಮೇಲೆ ಕರಗಳನ್ನು ವಿಧಿಸ ಬೇಕಾಯಿತು. ಕರಭಾರ ಹೊರಲಾಗದೆ ಜನ ಕುಸಿದಿದ್ದಾರೆ. ನಿಮಗಿನ್ನೂ ಪ್ರಾಣದ ಮೇಲಣ ಆಸೆಯಿದ್ದರೆ ಆ ಸಾಹಸಕ್ಕೆ ಕೈಹಾಕಬೇಡಿ. ನಿಮ್ಮ ಸಲುವಾಗಿಯೇ ಈ ಮಾತು ಹೇಳುತ್ತಿದ್ದೇನೆ."

ಎಂದು ನುಡಿದವರೇ ಎದ್ದು ಹೊರಗೆ ಹೊರಟುಹೋದರು.

ಮೂರನೆಯ ದಿನ ರಾಜಧಾನಿ ಸೇರಿದ ನರಸನಾಯಕರು, ರಾಜ್ಯ ಸೂತ್ರಗಳನ್ನು ವಹಿಸಿಕೊಂಡು, ಸರ್ವಾಧಿಕಾರಿ ಸ್ಥಾಪಿಸಿದರು.

ಕೊಂಡಮನಾಯಿಡು ಮನೆ, ಸಂಪತ್ತನ್ನು ರಾಜಭಟರು ವಶಪಡಿಸಿ ಕೊಂಡು, ನಾಯಿಡುವನ್ನು ಸೆರೆಯಲ್ಲಿಟ್ಟರು.

ಭಾಮಾ, ಅಚ್ಚಮಾಂಬೆಗೆ, ಸಾಕಷ್ಟು ವಸ್ತ್ರಾಭರಣಗಳನ್ನಿತ್ತು, ಅವರನ್ನು ನರಸನಾಯಕರು ಗಡಿಯಾಚೆ ಸಾಗಿಸಿಬಿಟ್ಟರು.

ನಗರ ಮಧ್ಯೆ ಏರ್ಪಡಿಸಲಾಗಿದ್ದ ವಧಾಸ್ತಂಭಕ್ಕೆ ಕೊಂಡಮನಾಯಿಡು ವನು ಬಿಗಿದು ಅವನನು ಗಲಿಗೇರಿಸಲಾಯಿತು.

ನರಸನಾಯಕರು ಸಾಮ್ರಾಜ್ಯವನ್ನು ಕೈವಶಪಡಿಸಿಕೊಂಡರೂ ಸಮ್ರಾಟ ರೆಂದು ಕರೆಸಿಕೊಳ್ಳುವ ಹವ್ಯಾಸಕ್ಕೆ ಬೀಳಲಿಲ್ಲ.

ರಾಜ್ಯದ ಆರ್ಥಿಕ ಏರುಪೇರುಗಳನ್ನು ಮೊದಲು ಸುಧಾರಿಸಿ, ಅನ್ಯಾಯ ವಾಗಿ ವಿಧಿಸಲಾಗಿದ್ದ ಕರಗಳನ್ನು ತೆಗೆದು ಹಾಕಿದರು. ಕೊಂಡಮನಾಯಿಡು ಪ್ರಭಾವದಿಂದ ಪುಂಡುಪಾಳೆಯಗಾರರಂತೆ ವರ್ತಿಸುತ್ತಿದ್ದ ಅಧಿಕಾರಿಗಳನ್ನು ನಿರ್ಮೂಲನಮಾಡಿ, ಪ್ರಜಾವರ್ಗಕ್ಕೆ ಅರಸೊತ್ತಿಗೆಯಲ್ಲಿ ನಂಬಿಕೆ ಬರುವಂತೆ ಮಾಡಿದರು.

ನರಸನಾಯಕರು ರಾಜ್ಯಾಧಿಕಾರ ವಹಿಸಿಕೊಂಡ ಕೂಡಲೆ, ವಿಜಾಪುರದ ಇಬ್ರಾಹಿಂ ಆದಿಲ್‌ಷಹನೂ, ಒರಿಸ್ಸದ ಅರಸನೂ ವಿಜಯನಗರದ ಮೇಲೆ ದಂಡೆತ್ತಿ ಬಂದರು. ನರಸನಾಯಕರು ತುಂಗಭದ್ರೆಯ ಆಚೆಯೇ ಅವರನ್ನು ಸಂಧಿಸಿ, ಬಲವಾಗಿ ಪೆಟ್ಟುಗೊಟ್ಟು, ಉಭಯ ಸೇನೆಗಳು ಹಿಮ್ಮೆಟ್ಟುವಂತೆ ಮಾಡಿದರು.

ದಕ್ಷಿಣದಲ್ಲಿ ಚೋಳರು ಪ್ರಬಲಿಸಿ, ವಿಜಯನಗರಕ್ಕೆ ಸೇರಿದ ಪ್ರದೇಶ ಗಳನ್ನು ಲೂಟಿ ಮಾಡುತ್ತಿದ್ದರು. ನರಸನಾಯಕರು ಸಸೈನ್ಯರಾಗಿ ದಕ್ಷಿಣ ದಿಗ್ವಿಜಯ ಕೈಗೊಂಡು ತಂಜಾವೂರು, ಮಧುರೆ, ರಾಮೇಶ್ವರದಿಂದ ಲಂಕೆಯ ವರೆಗಿರುವ ಪ್ರದೇಶವನ್ನು ಕೈವಶಪಡಿಸಿಕೊಂಡು, ಶ್ರೀರಂಗಪಟ್ಟಣವನ್ನು ಕಸಿದುಕೊಂಡು, ಒಹಮನಿಯರಿಗೆ ಸೇರಿದ್ದ ಮಾನವದುರ್ಗವನ್ನು ಸ್ವಾಧೀನಕ್ಕೆ ತೆಗೆದುಕೊಂಡು ರಾಜಧಾನಿಗೆ ಹಿಂದಿರುಗಿದರು,

ಈ ದಿಗ್ವಿಜಯದ ನೆನಪಿಗಾಗಿ ನರಸನಾಯಕರು ದಕ್ಷಿಣ ಸಮುದ್ರಾಧಿ ಪತಿ, ಗಜಪತಿ ರಾಯರಗಂಡಭೇರುಂಡ, ದುಷ್ಟರಾಜ್‌ಮೃಗ ಶಾರ್ದೂಲ ಮೊದಲಾದ ಬಿರುದುಗಳನ್ನು ಧರಿಸಿದರು.

ವಿದ್ಯಾಭಿಮಾನಿಗಳಾಗಿದ್ದ ನರಸನಾಯಕರು ನಂದಿ ಮಲ್ಲಯ್ಯ, ಘಂಟ ಸಿಂಗಯ್ಯ ಮೊದಲಾದ ಕವಿಗಳನ್ನು ಪ್ರೋತ್ಸಾಹಿಸಿದರು.

ನರಸನಾಯಕರಿಗೆ ಮೂವರು ಪತ್ನಿಯರಿದ್ದರು. ಹಿರಿಯಳಾದ ತಿಪ್ಪಾಂಬಿಕೆಯಲ್ಲಿ ವೀರನರಸಿಂಹ, ಎರಡನೆಯವಳಾದ ನಾಗಲಾದೇವಿಯಲ್ಲಿ ಕೃಷ್ಣದೇವರಾಯ, ಮೂರನೆಯವಳಾದ ಓಬಾಂಬಿಕೆಯಲ್ಲಿ ಅಚ್ಯುತರಾಯ, ರಂಗರಾಯ ಜನಿಸಿದರು

ಸಾಮ್ರಾಜ್ಯದ ಗೌರವವನ್ನು ಕಾಪಾಡಿ; ಅದರ ಅಸ್ತಿತ್ವವನ್ನು ಭದ್ರ ಪಡಿಸಿದ ನರಸನಾಯಕರು ಅಕಾಲ ಮೃತ್ಯುವಶರಾದರು. ಪೆನುಕೊಂಡೆಯಲ್ಲಿದ್ದ ನರಸಿಂಹರಾಯರು ಮತ್ತೆ ಪಟ್ಟಕ್ಕೆ ಬಂದರು.

ನರಸಿಂಹರಾಯರಿಗೆ ಹಿಂದಿನ ಅನುಭವದಿಂದ ಚೆನ್ನಾಗಿ ಬುದ್ಧಿ ಬಂದಿತ್ತು.

ನರಸನಾಯಕರ ಬಗ್ಗೆ ಜನತೆ ತಳೆದಿದ್ದ ಗೌರವವನ್ನು ಅನುಲಕ್ಷಿಸಿದ ನರಸಿಂಹರಾಯರು, ನಾಯಕರ ಹಿರಿಯಮಗ ವೀರನರಸಿಂಹನಿಗೆ ಪ್ರಧಾನಿ ಮಂತ್ರಿಪದವಿ ಅನುಗ್ರಹಿಸಿದರು.

ಶತ್ರುವಿನ ಮಗನ ಬಗ್ಗೆ ಮಹಾಪ್ರಭುಗಳು ತೋರಿದ ಔದಾರ್ಯದಿಂದ, ಅವರ ಘನತೆ ಹೆಚ್ಚಿತು.

ಪ್ರಜಾಪ್ರೇಮವನ್ನು ದೊರಕಿಸಿಕೊಂಡಿಲ್ಲದೆ ತಮ್ಮ ಅರಸೊತ್ತಿಗೆ ಮತ್ತೆ ಪರರ ಪಾಲಾಗುತ್ತದೆಯೆಂದು ಅರಿತಿದ್ದ ರಾಯರು, ಶ್ರೀವ್ಯಾಸತೀರ್ಥರ ದರ್ಶನ ಪಡೆದು, ಅವರ ಮುಂದೆ ತಮ್ಮ ತಪ್ಪು ಒಪ್ಪಿಕೊಂಡರು.

ಭಗವಾನರು ಪ್ರಭುಗಳಿಗೆ ಸಮಯೋಚಿತ ಬುದ್ಧಿ ಹೇಳಿ,

"ದೊರೆ ಪ್ರಜರನ್ನೇ ಭಗವಂತ ಎಂದು ಭಾವಿಸಬೇಕು. ಪ್ರಜೆಗಳು ಅಸಂತುಷ್ಟರಾದರೆ ಎಂಥ ಸಾಮ್ರಾಜ್ಯವೂ ಉಳಿಯುವುದಿಲ್ಲ"

ಎಂದು ಎಚ್ಚರಿಸಿದರು.

ನರಸಿಂಹರಾಯರ ಮೂರು ವರ್ಷದ ಆಳ್ವಿಕೆ ಜನಕ್ಕೆ ಹಿತಾವಹವಾಯಿತು. ಕಳೆದುಕೊಂಡಿದ್ದ ಪ್ರಜಾನುರಾಗವನ್ನು ಪುನರಾರ್ಜಿಸಿಕೊಂಡು ನರಸಿಂಹರಾಯರು ಆದರ್ಶ ರೀತಿಯಲ್ಲಿ ರಾಜ್ಯಭಾರ ನಡೆಸಿದರು.

ದುರ್ದೈವ ನರಸಿಂಹರಾಯರು ಹೆಚ್ಚು ಕಾಲ ಬದುಕಲಿಲ್ಲ. ಮೂರು ವರ್ಷಗಳು ಕಳೆದ ಕೂಡಲೆ ಅಕಾಲ ಮೃತ್ಯು ಅವರನ್ನು ಕಬಳಿಸಿತು.

ನರಸಿಂಹರಾಯರ ಇಬ್ಬರು ಮಕ್ಕಳು ನರಸಿಂಹರಾಜ, ದೇವಪ್ಪ ಚಿಕ್ಕವ

ರಾಗಿದ್ದುದರಿಂದ ನರಸನಾಯಕರ ಮಗ ವೀರನರಸಿಂಹ **ಭುಜಬಲರಾಯ**ನೆಂಬ ಬಿರುದು ಧರಿಸಿ ರಾಜ್ಯವನ್ನು ಕೈವಶಪಡಿಸಿಕೊಂಡ.

ವೀರನರಸಿಂಹರಾಯರಿಗೆ ತಂದೆಯ ಪರಾಕ್ರಮವೂ ಇರಲಿಲ್ಲ; ಸಾಳ್ವರಸರ ಔದಾರ್ಯವೂ ಇರಲಿಲ್ಲ.

ಪಕ್ಷ ವಿಪಕ್ಷಗಳ ಸಂಧಾನುಸಂಧಾನಕ್ಕೆ ಸಿಕ್ಕಿ ಸಾಮ್ರಾಜ್ಯ ದುರ್ಬಲವಾಯಿತು.

ಸಾಳ್ವರ ಅಭಿಮಾನಿಗಳು ಹೇಗಾದರೂ ಮಾಡಿ ವೀರನರಸಿಂಹರಾಯರನ್ನು ತುಳಿದು ನರಸಿಂಹರಾಜನನ್ನು ಪಟ್ಟಕ್ಕೆ ತರಲು ಹವಣಿಸುತ್ತಿದ್ದರು.

ವಿಜಯನಗರದಲ್ಲಿ ಕಾಳ್ಗಿಚ್ಚಿನಂತೆ ವಿಸ್ತರಿಸಿದ್ದ ಸಂಕ್ಷೋಭೆಯ ವಾತಾವರಣದ ಪೂರ್ಣ ಪ್ರಯೋಜನ ಪಡೆಯಲು ನಿರ್ಧರಿಸಿದ ಒರಿಸ್ಸದ ಗಜಪತಿ ರಾಜ ಕೊಂಡವೀಡು, ಉದಯಗಿರಿ ಕೋಟೆಗಳನ್ನು ಕೈವಶಪಡಿಸಿಕೊಂಡ.

ಮಂಡಲೇಶ್ವರರೂ, ಪ್ರಾಂತ್ಯಾಧಿಕಾರಿಗಳೂ ಸ್ವತಂತ್ರರಾಗಲು ಹವಣಿಸಿದರು. ಒಳಗಿನ ಶತ್ರುಗಳನ್ನೆದುರಿಸುವ ವೇಳೆಗೆ ವೀರನರಸಿಂಹರಾಯರಿಗೆ ಸಾಕುಸಾಕಾಗಿ ಹೋಯಿತು. ಭಂಡಾರ ಬರಿದಾಯಿತು. ರಾಜ್ಯಾಧಿಕಾರಿಗಳು ಜನರನ್ನು ಸುಲಿದು ತಿನ್ನಲಾರಂಭಿಸಿದರು.

ವೀರನರಸಿಂಹರಾಯರ ತಮ್ಮನಾದ ಕೃಷ್ಣದೇವರಾಯ ಪರಿಸ್ಥಿತಿಯನ್ನು ಸುಧಾರಿಸಲೆತ್ನಿಸಿದ.

ಮಹಾಪ್ರಭುಗಳೇ ಅವನ ಪ್ರಯತ್ನಗಳಿಗೆ ಅಡ್ಡಿ ಆತಂಕಗಳನ್ನೊದಗಿಸಿ ಕೃಷ್ಣದೇವರಾಯ ಮುಂದುವರೆಯದಂತೆ ಅಷ್ಟದಿಗ್ಬಂಧನ ಮಾಡಿದರು.

ದುರ್ಬಲರೂ, ರೋಗಗ್ರಸ್ತರೂ ಆಗಿದ್ದ ವೀರನರಸಿಂಹರಾಯರು ಒಮ್ಮೆ ಹಾಸಿಗೆ ಹಿಡಿದು ಮಲಗಿದರು.

ತಮ್ಮ ಎಂಟು ವರ್ಷದ ಏಕೈಕ ಪುತ್ರನಿಗೆ ಎಲ್ಲಿ ರಾಜ್ಯಾಧಿಕಾರ ತಪ್ಪಿಹೋಗುವುದೋ ಎಂಬ ಚಿಂತೆ ಅವರನ್ನು ಒಂದೇ ಸಮನಾಗಿ ಕಾಡಹತ್ತಿತು.

ಪ್ರಧಾನ ಮಂತ್ರಿಯಾದ ಸಾಳುವ ತಿಮ್ಮನಾಯಕನನ್ನು ಬರಮಾಡಿಕೊಂಡು ಮಹಾಪ್ರಭುಗಳು,

"ಈ ಸಾರಿ ನಮಗೆ ಗುಣವಾಗುವ ಸಂಭವವಿಲ್ಲ. ಯುವರಾಜ

ಕುಮಾರರ ಪಾಡೇನಾಗುತ್ತದೋ ಎಂದು ನಾವು ಹಗಲಿರುಳೂ ಯೋಚಿಸು ತ್ತಿದ್ದೇವೆ ತಿಮ್ಮನಾಯಕರೇ" ಎಂದರು.

"ಯುವರಾಜಕುಮಾರರು ತಮ್ಮ ಉತ್ತರಾಧಿಕಾರಿಗಳಾಗುವ ಬಗ್ಗೆ ಯಾರೂ ವಿರೋಧ ವ್ಯಕ್ತಪಡಿಸಿಲ್ಲವಲ್ಲ ಮಹಾಪ್ರಭು, ಆ ಬಗ್ಗೆ ತಾವೇಕೆ ಚಿಂತಿಸಬೇಕು ?"

"ನಮ್ಮ ಮನೆಯಲ್ಲೇ ಒಂದು ಹಾವು ಸೇರಿಕೊಂಡಿದೆ."

"ಹಾವನ್ನು ಕೊಂದುಹಾಕಿದರಾಯಿತು."

"ಆ ಕೆಲಸ ನೀವು ನಿರ್ವಹಿಸುವಿರಾ ? ನಾನು ನಿಮ್ಮನ್ನು ನಂಬಲೇ ?"

"ಇಷ್ಟು ಅಲ್ಪ ವಿಷಯಕ್ಕಾಗಿ ತಾವು ನನ್ನನ್ನು ಪ್ರಾರ್ಥಿಸಬೇಕೇ ಮಹಾಪ್ರಭು ತಾವು ಆಜ್ಞೆಯಿತ್ತರೆ ಸಾಕು – ಅದನ್ನು ಶಿರಸಾವಹಿಸಿ ಪಾಲಿಸುವುದಷ್ಟೇ ಸೇವಕನ ಕರ್ತವ್ಯ – ಹಾವು ಯಾವದು, ಎಲ್ಲಿದೆ ತಾವು ತಿಳಿಸಿದರೆ ಸಾಕು."

"ಸ್ವಲ್ಪಕಾಲ ಆಲೋಚಿಸಿದ ಮಹಾಪ್ರಭುಗಳು,

"ಈ ವಿಷಯ ನಮ್ಮಲ್ಲಿ ನಿಮ್ಮಲ್ಲಿ ಇಬ್ಬರಲ್ಲೇ ಇರಬೇಕು.'

"ನಿಸ್ಸಂದೇಹವಾಗಿ."

"ನನ್ನ ತಮ್ಮ ಕೃಷ್ಣದೇವರಾಯನದೇ ನನಗೆ ಭಯ – ಅವನನ್ನು ನಿಗ್ರಹಿಸಿಬಿಟ್ಟರೆ ಯುವರಾಜಕುಮಾರರ ಭವಿಷ್ಯ ಸುಗಮವಾಗುತ್ತದೆ."

ಮಹಾಪ್ರಭುಗಳ ದುರಾಲೋಚನೆ ಕೇಳಿದ ಸಾಳುವ ತಿಮ್ಮನಾಯಕರು ಬೆಚ್ಚಿದರು. ಅವರ ಆಪಾದಮಸ್ತಕ ಬೆವರೇರಿತು.

ಮಂತ್ರಮುಗ್ಧರಂತೆ ನಿಂತ ಮಹಾಪ್ರಧಾನಿಯನ್ನು ದಿಟ್ಟಿಸಿ ನೋಡಿದ ಮಹಾಪ್ರಭುಗಳು.

"ಅನುಮಾನಿಸುವಿದೇಕೆ ?"

ಎಂದು ಕೇಳಿದರು.

"ಕೃಷ್ಣದೇವರಾಯರು ತಮ್ಮ ಸೋದರರು – ಸೋದರ ವಧೆಯಿಂದ ತಮಗೆ ಮಾತ್ರವೇ ಅಲ್ಲ – ತಮ್ಮ ವಂಶಕ್ಕೇ ಅಪಕೀರ್ತಿ ಬರುತ್ತದೆ. ಯುವ ರಾಜ ಕುಮಾರರ ಮಾರ್ಗಕ್ಕೆ ಅವರು ಅಡ್ಡಲಾಗಿ ಬರದಂತೆ ಬೇರೆ ವಿಚಾರ ಮಾಡುವುದು ಒಳ್ಳೆಯದು."

" ಹೋಗಲಿ – ಕೊಲ್ಲಿಸಬೇಡಿ. ಕೃಷ್ಣದೇವರಾಯನ ಎರಡು ಕಣ್ಣುಗಳನ್ನು ಕೀಳಿಸಿ ನಮಗೆ ತಂದು ತೋರಿಸಿ "

" ಮರಣದಂಡನೆಗಿಂತ ಇದು ಎಷ್ಟೋ ಒಳ್ಳಿತು."

" ಈ ಕೆಲಸ ನಿರ್ವಹಿಸುವಿರಾ ತಿಮ್ಮನಾಯಕರೇ."

" ಅಗತ್ಯವಾಗಿ ನಿರ್ವಹಿಸುತ್ತೇನೆ ಮಹಾಪ್ರಭೂ."

ಎಂದು ತಿಮ್ಮನಾಯಕರು ಪ್ರಮಾಣ ವಚನವನ್ನಿತ್ತರು.

ದೈವಭಕ್ತಳೂ, ಕೊಡಗೈಯೊಡತಿಯೂ ಆಗಿದ್ದ ಸಾಳುವ ತಿಮ್ಮ ನಾಯಕರ ಪತ್ನಿ ಗೌರಾಂಬಿಕೆಗೆ ಮಕ್ಕಳಾಗಲಿಲ್ಲ

ಸೇತು ರಾಮೇಶ್ವರದಿಂದ, ಕೇದಾರದವರೆಗೆ ಯಾತ್ರೆ ಮಾಡಿ ಬಂದಳು. ಕಂಡಕಂಡ ದೇವರಿಗೆ ಕೈಮುಗಿದಳು. ಉಪವಾಸ, ನೋಂಪಿ, ದಾನಧರ್ಮ ಗಳಿಗಂತೂ ಎಣಿಯೇ ಇರಲಿಲ್ಲ. ಆದರೂ ಅವಳ ಮನೋರಥ ಈಡೇರಲಿಲ್ಲ.

ಮನೋವ್ಯಾಕುಲದಲ್ಲಿ ಪರಿತಪಿಸುತ್ತಿದ್ದ ಗೌರಾಂಬೆಯ ದುಃಖ ನಿವಾರಣೆ ವಿಚಿತ್ರ ರೀತಿಯಲ್ಲಾಯಿತು.

ಪ್ರಭುಸೋದರ ಕೃಷ್ಣದೇವರಾಯ, ತಿಮ್ಮನಾಯಕರಲ್ಲೂ, ಗೌರಾಂಬೆ ಯಲ್ಲೂ ಅನ್ಯಾದೃಶ ಭಕ್ತಿ, ವಿಶ್ವಾಸ ತಳೆದಿದ್ದ. ಅವನ ಧೀರ, ಗಂಭೀರ ನಡೆ ನಳಿಕೆ, ವಯೋಧರ್ಮ ಮೀರಿದ ಜಾಣ್ಮೆ, ಅಪಾರ ದೇಶಭಕ್ತಿ, ದೈವ ಭಕ್ತಿಗಳನ್ನು ಮೆಚ್ಚಿಕೊಂಡ ನಾಯಕರು, ಗೌರಾಂಬೆ ಅವನನ್ನೇ ಮಗನೆಂದು ಭಾವಿಸಿ ಪ್ರೀತಿಸುತ್ತಿದ್ದರು. ಕೃಷ್ಣದೇವರಾಯ ನಿಷ್ಕಲ್ಮಷ ಪ್ರೇಮ ತುಂಬಿದ ನಾಯಕರನ್ನು 'ಅಪ್ಪಾಜಿ' ಯೆಂದೂ, ಗೌರಾಂಬೆಯನ್ನು 'ಅಮ್ಮಾಜಿ' ಯೆಂದೂ ಸಂಬೋಧಿಸುತ್ತಿದ್ದ.

ಆ ದಿನ ಅರಮನೆಯಿಂದ ಹಿಂದಿರುಗಿದ ಪತಿ, ನಿಸ್ತೇಜನಾಗಿದ್ದುದನ್ನು ಕಂಡು ಗಾಬರಿಗೊಂಡ ಗೌರಾಂಬಿಕೆ,

"ಮಹಾಪ್ರಭುಗಳಿಗೆ ಹೇಗಿದೆ?"

ಎಂದು ಕೇಳಿದಳು.

"ಹಾಗೆಯೇ ಇದ್ದಾರೆ ಗೌರಾ ... ಹೆಚ್ಚುಕಾಲ ಅವರು ಬದುಕುವುದು ಅಸಂಭವ. ಸಾವು ಬದುಕುಗಳ ಮಧ್ಯೆ ಅವರ ಜೀವ ತೊಯ್ದಾಡುತ್ತಿದೆ."

"ದೈವಸಂಕಲ್ಪದಂತೆ ಮಹಾಪ್ರಭುಗಳು ಪರಲೋಕವಾಸಿಗಳಾದರೆ ನಮ್ಮ ಕೃಷ್ಣನೇ ಸಿಂಹಾಸನವನ್ನೇರಬೇಕು. ಯುವರಾಜಕುಮಾರರು ಇನ್ನೂ "ಹಸುಮಕ್ಕಳು.

ಗೌರಾಂಬಿಕೆ 'ಕೃಷ್ಣ'ನ ಹೆಸರು ಎತ್ತಿದೊಡನೆಯೇ ನಾಯಕರ ದುಃಖದ ಕಟ್ಟೆಯೊಡೆಯಿತು.

ಬಿಕ್ಕಳಿಸಿ ಅಳುತ್ತ ಕುಳಿತ ಪತಿಯನ್ನು ಸಮಾಧಾನಮಾಡುತ್ತಾ ಗೌರಾಂಬಿಕೆ,

" ಏಕಿಷ್ಟು ದುಃಖ ಪಡುವಿರಿ. ನನ್ನ ಕೃಷ್ಣ ಚೆನ್ನಾಗಿರುವನಷ್ಟೆ !"

" ಇದ್ದಾನೆ.

ಎಂದು ಮಹಾಪ್ರಭುಗಳ ಆಜ್ಞೆಯನ್ನು ನಿರೂಪಿಸಲು ಗೌರಾಂಬಿಕೆ ಕಣ್ಣೀರ್ಗರೆಯುತ್ತ,

" ನಿಮ್ಮ ರಾಜ್ಯವೂ ಬೇಡ – ಕೋಶವೂ ಬೇಡ. ನನ್ನ ಕೃಷ್ಣ ಪೂರ್ಣಾಯುಷ್ಮಂತನಾಗಿ ಎಲ್ಲಿಯಾದರೂ ಚೆನ್ನಾಗಿದ್ದರೆ ಸಾಕು. ಅವನನ್ನು ಕೂಡಲೆ ಬರಮಾಡಿ, ನಾನು ಅವನನ್ನು ಕರೆದುಕೊಂಡು, ಮಹಿಷ ಮಂಡಲಕ್ಕೋ, ರಾಮೇಶ್ವರಕ್ಕೋ ಹೋಗಿ, ಈ ಗೊಂದಲ ಅಡಗಿದ ಮೇಲೆ ಬರುತ್ತೇನೆ."

" ಧೈರ್ಯಗೆಡಬಾರದು – ಗೌರಾ – ಒದಗಿ ಬಂದಿರುವ ಮಹಾ ವಿಪತ್ತನ್ನು ನಿವಾರಿಸುವುದು ಹೇಗೆಂದು ಸಾವಕಾಶವಾಗಿ ಯೋಚಿಸಬೇಕು."

" ಸಾವಕಾಶಮಾಡಿದರೆ ಅನರ್ಥ ಸಂಭವಿಸುತ್ತದೆ. ಪ್ರಭುಗಳು ಹೇಳಿದ ಕಾರ್ಯ ನೀವು ನಿರ್ವಹಿಸಲಿಲ್ಲವೆಂದು ಅವರಿಗೆ ತಿಳಿದರೆ, ಸುಮ್ಮನಿರುವರೇ, ಯಾರಾದರೂ ಕೊಲೆಗಡಕರಿಗೆ ಹಣಕೊಟ್ಟು ತಮ್ಮ ಕಾರ್ಯ ಸಾಧಿಸುತ್ತಾರೆ. – ನನ್ನ ಕೃಷ್ಣನನ್ನು ನಾನೀಗಲೇ ನೋಡಬೇಕು – "

ಎಂದು ತಾನೇ ಸೇವಕನನ್ನು ಕರೆದು, ಕೃಷ್ಣದೇವರಾಯ ಎಲ್ಲಿದ್ದರೂ ಕರೆತರುವಂತೆ ಆಜ್ಞಾಪಿಸಿದಳು.

ಅರ್ಧ ಗಂಟೆ ಕಳೆದಿರಬಹುದು.

ಗೌರಾಂಬೆ ಹೆಬ್ಬಾಗಿಲು ಬಿಟ್ಟು ಅಲುಗಾಡಲಿಲ್ಲ.

ಕುದುರೆಯ ಖುರಪುಟ ಕೇಳಿ ಬರಲು 'ನನ್ನ ಕೃಷ್ಣ ಬಂದ' ಎಂದಳು.

ಕುದುರೆಯಿಂದಿಳಿದು, ಅದನ್ನು ಒಂದು ಮರಕ್ಕೆ ಬಿಗಿದು ಒಳಕ್ಕೆ ಬಂದ ಕೃಷ್ಣದೇವರಾಯನನ್ನು ಬಿಗಿದಪ್ಪಿದ ಗೌರಾಂಬೆ, ಕಂಬನಿಗರೆಯುತ್ತ,

" ಬಂದೆಯಾ ನನ್ನಯ್ಯಾ – ನನ್ನಪ್ಪಾ – ನನ್ನ ಕೃಷ್ಣಾ "
ಎಂದು ಅವನ ಮುಖ ಮೈ ನೇವರಿಸಿದಳು.

ಅವಳ ನಡೆವಳಿಕೆಯ ಕಾರಣವನ್ನರಿಯದ ಕೃಷ್ಣದೇವರಾಯ, ಭ್ರಾಂತನಾಗಿ,

" ಅಮ್ಮಾಜಿಯವರೇಕೆ ಇಷ್ಟು ಉದ್ವಿಗ್ನರಾಗಿದ್ದಾರೆ ಅಪ್ಪಾಜಿ " ಎಂದು ಕೇಳಿದ.

ನಾಯಕರು ಕೃಷ್ಣದೇವರಾಯನನ್ನು ಹತ್ತಿರ ಕರೆದು ಪಕ್ಕದಲ್ಲಿ ಕೂಡಿಸಿ ಕೊಂಡು, ಅವನ ತಲೆ, ಮುಖ ನೇವರಿಸಿ,

" ಗೌರನನ್ನೂ ನನ್ನನ್ನೂ ತುಂಬ ಪ್ರೀತಿಸುವೆಯಲ್ಲವೇ ಕೃಷ್ಣಾ" ಎಂದು ಕೇಳಿದರು.

ಕೃಷ್ಣದೇವರಾಯ ನಕ್ಕು,

" ಎಂಥ ವಿಲಕ್ಷಣ ಪ್ರಶ್ನೆ ಇದು ಅಪ್ಪಾಜಿ. ' ನಾನು ನಿಮ್ಮನ್ನು ಪ್ರೀತಿಸುತ್ತೇನೆ ' ಎಂದು ನನ್ನ ಬಾಯಲ್ಲಿ ಕೇಳಲು, ಇಷ್ಟು ತ್ವರೆಯಿಂದ ಬರಮಾಡಿದಿರಾ ?"

" ನನ್ನ ಪ್ರಶ್ನೆಗೆ ಉತ್ತರ ಕೊಡು."

" ನಿಮ್ಮನ್ನು ನಾನು ಪ್ರೀತಿಸುವುದೇನು ಹೆಚ್ಚು ಅಪ್ಪಾಜಿ - ನಿಮಗಾಗಿ ಯಾವ ತ್ಯಾಗಮಾಡಲೂ ಸಿದ್ಧನಾಗಿದ್ದೇನೆ."

" ನಿಜವೇ ?"

" ಗುರುದೇವ ಶ್ರೀವ್ಯಾಸತೀರ್ಥರ ಪಾದದಾಣೆಗೂ ನಿಜ."

" ಹಾಗಾದರೆ ಕೃಷ್ಣ – ನಾನೊಂದು ಕೇಳುವೆ ಕೊಡುವೆಯಾ ?"

" ನಿಸ್ಸಂದೇಹವಾಗಿ."

" ವಸ್ತು ಯಾವದೆಂದು ತಿಳಿದ ಮೇಲೆ ಹಿಂದೆಗೆಯುವೆಯೋನೋ ?"

" ಅಪ್ಪಾಜಿ, ನಾನು ಗುರುದೇವರ ಮೇಲೆ ಆಣೆ ಮಾಡಿದ್ದೇನೆ."

" ಕೃಷ್ಣಾ – ನನಗೆ – ನನಗೆ ನಿನ್ನ ಎರಡು ಕಣ್ಣುಗಳು ಬೇಕಾಗಿವೆ ಕೊಡುವೆಯಾ ?"

" ಕಣ್ಣುಗಳು – ಅದನ್ನು ತೆಗೆದುಕೊಂಡು ಏನು ಮಾಡುವಿರಿ ಅಪ್ಪಾಜಿ "

" ಮಹಾಪ್ರಭುಗಳಿಗರ್ಪಿಸಿ ನನ್ನ ರಾಜಭಕ್ತಿ ಪ್ರದರ್ಶಿಸುತ್ತೇನೆ."

" ಏನು ? – ನನ್ನ ಅಣ್ಣಂದಿರು ನನ್ನ ಕಣ್ಣುಗಳನ್ನು ಬಯಸು ತ್ತಿರುವರೇ ?"

" ಹೌದು."

" ಏಕೆ ?"

" ಪರಾಕ್ರಮಶಾಲಿಯಾದ ನೀನು ಎಳೆಯ ಯುವರಾಜಕುಮಾರನನ್ನು ಮೂಲೆಗೊತ್ತುವೆಯೆಂಬ ಭಯ ಅವರನ್ನಾವರಿಸಿದೆ."

" ವಿಜಯನಗರ ಸಾಮ್ರಾಜ್ಯದಲ್ಲಿ ಪರಾಕ್ರಮಶಾಲಿಯಾಗಿರುವುದು ಒಂದು ಅಪರಾಧವೆಂದು ನಾನು ಭಾವಿಸಿರಲಿಲ್ಲ."

" ಅಪರಾಧವಾಗಿದೆ ಕೃಷ್ಣ –"

" ಶ್ರೀಗುರು ಚರಣಗಳ ಮೇಲೆ ಆಣೆ ಮಾಡಿದ್ದೇನೆ ಅಪ್ಪಾಜಿ – ನಾನು ಮಾತಿಗೆ ತಪ್ಪುವುದಿಲ್ಲ. ಕಣ್ಣುಗಳನ್ನು ಈಗಲೇ ಕಿತ್ತು ಕೊಡಲೇ ?"

ಕೃಷ್ಣದೇವರಾಯನನ್ನು ಅಪ್ಪಿ ಹಿಡಿದ ಗೌರಾಂಬೆ,

" ನನ್ನ ಕೃಷ್ಣನ ಕಣ್ಣು ಮುಟ್ಟುವವರ ಕೈ ಸೀಳಿ ಬಿಡುತ್ತೇನೆ."

ಎಂದು ಗರ್ಜಿಸಿ, ವೀರಾವೇಶ ತಳೆದು ನಿಂತುಬಿಟ್ಟಳು.

" ಗೌರಾ – ನೀನೆಂಥ ಹುಚ್ಚಿಯೋ ! ಕೃಷ್ಣನ ಕೂದಲು ಕೊಂಕುವು ದಕ್ಕೆ ನಾನು ಅವಕಾಶಕೊಡುತ್ತೇನೆಂದು ಭಾವಿಸಿರುವೆಯಾ – ನನ್ನ ಪ್ರಾಣ ಒತ್ತೆಯಿಟ್ಟು ನಿನ್ನ ಮುದ್ದು ಮಗನನ್ನು ಕಾಪಾಡುತ್ತೇನೆ ಸುಮ್ಮನಿರು."

" ಸ್ವಾಮಿ ಪಂಪಾನಾಥಾ – ತಾಯಿ ಭುವನೇಶ್ವರಿ – ಸದ್ಗುರು ವ್ಯಾಸ ಯೋಗೀಂದ್ರ ನನ್ನ ಮಗುವನ್ನು ಕಾಪಾಡಿ........"

ಎಂದು ಗೌರಾಂಬೆ ಮೊರೆಯಿಟ್ಟಳು.

ಭದ್ರಾಸನ ಬಿಟ್ಟು ಎದ್ದು ನಿಂತ ತಿಮ್ಮನಾಯಕರು,

" ಗೌರಾ, ನೀನೂ ಕೃಷ್ಣ ಈ ಕೂಡಲೆ ಚಂದ್ರಗಿರಿಗೆ ಹೊರಟು ಬಿಡಿ. ಚಂದ್ರಗಿರಿಯಲ್ಲಿರುವ ಲಕ್ಷ್ಮಣ ದಣ್ಣಾಯಕ ನನಗೆ ಬೇಕಾದವನು. ಅವನ ಆಶ್ರಯದಲ್ಲಿ ಕೆಲವು ಕಾಲವಿರಿ. ಇಲ್ಲಿನ ಸ್ಥಿತಿಗತಿ ಸ್ವಲ್ಪ ಹದಕ್ಕೆ ಬಂದ ಕೂಡಲೆ ನಿಮ್ಮನ್ನು ಬರಮಾಡಿಕೊಳ್ಳುತ್ತೇನೆ."

ಕೃಷ್ಣದೇವರಾಯ ಮಂಡಿಯೂರಿ ಮೊದಲು ಗೌರಾಂಬೆಗೆ ಪ್ರಣಾಮ ಮಾಡಿದ.

ಗೌರಾಂಬೆ ಅವನ ತಲೆಯಮೇಲೆ ಕೈಯಿಟ್ಟು

" ದೀರ್ಘಾಯುಷ್ಮಂತನಾಗು "

ಎಂದಳು.

ಕೃಷ್ಣದೇವರಾಯ ತಿಮ್ಮನಾಯಕರಿಗೆ ಅಭಿನಂದಿಸಲು, ಅವರು ಕೃಷ್ಣನ ತಲೆಯ ಮೇಲೆ ಅಭಯ ಹಸ್ತವನ್ನಿಟ್ಟು,

" ಏಳು – ವಿಜಯನಗರದ ಸಾಮ್ರಾಜ್ಯಾಧೀಶ ಶ್ರೀಕೃಷ್ಣದೇವರಾಯ " ಎಂದರು.

"ದಯೆಯಿಟ್ಟು ನಾನು ಹೇಳುವುದನ್ನು ಸಾವಕಾಶವಾಗಿ ಲಾಲಿಸಿ. ಯುವರಾಜ ಕುಮಾರರ ಬಗ್ಗೆ ನಿಮಗಿರುವಷ್ಟೇ ಪ್ರೀತಿ ಗೌರವ ನನಗೂ ಇದೆ. ಅವರೇ ಸಿಂಹಾಸನವನ್ನೇರಬೇಕಾದುದೂ ಸಹಜವಾಗಿದೆ. ಆದರೆ ನಾವಿಂದು ಯೋಚಿಸಬೇಕಾದುದು ವ್ಯಕ್ತಿಯ ಹಿತಾಹಿತವನ್ನಲ್ಲ; ಸಾಮ್ರಾಜ್ಯದ ಭವಿಷ್ಯವನ್ನು. ಕಾಲು ಶತಮಾನದಿಂದ ಸಾಮ್ರಾಜ್ಯದಲ್ಲಿ ನಡೆದಿರುವ ಘಟನೆಗಳನ್ನು ಸ್ಮರಿಸಿಕೊಳ್ಳಿ. ಸಿಂಹಾಸನಾಕ್ರಮಣಕ್ಕಾಗಿ ನಡೆದಿರುವ ಒಳಜಗಳಗಳಿಂದ ಸಾಮ್ರಾಜ್ಯದ ತಳಪಾಯವೇ ಅಲುಗಾಡಿದೆ. ಇದು ಸಂಧಿಕಾಲ – ಬಹಮನಿಯವರ ಆಳ್ವಿಕೆ ಕೊನೆಗಂಡ ಮೇಲೆ ವಿಜಾಪುರದ ಆದಿಲ್‌ಶಾಹಿಗಳು ಪ್ರಬಲರಾಗಿದ್ದಾರೆ. ಈಗಾಗಲೇ ನಾವು ರಾಜ್ಯದ ಕೆಲಭಾಗಗಳನ್ನು ಕಳೆದುಕೊಂಡಿದ್ದೇವೆ. ಅವುಗಳನ್ನು ಹಿಂದಕ್ಕೆ ಪಡೆಯಬೇಕಲ್ಲದೆ, ಸಾಮ್ರಾಜ್ಯದ ಅಸ್ತಿಭಾರವನ್ನು ಬಲಪಡಿಸಬೇಕು. ಈ ಕೆಲಸ ಸಾಧಿಸಬಲ್ಲ ಮಹಾಪುರುಷನಿಗೇ ನಾವು ರಾಜ್ಯ ಒಪ್ಪಿಸಬೇಕು. ಸಿಂಹವಿಕ್ರಮರಾದ ಶ್ರೀಕೃಷ್ಣದೇವರಾಯರೊಬ್ಬರೇ ಈ ಸಂಧಿಕಾಲದಲ್ಲಿ ಸಿಂಹಾಸನವನ್ನೇರಲು ಸಮರ್ಥರೆಂದು ನಮ್ಮ ಅಭಿಮತ – ನೀವು ನಮ್ಮ ಅಭಿಪ್ರಾಯ ಒಪ್ಪುವುದಾದರೆ ನಮ್ಮೊಂದಿಗೆ [illegible]

'ಶ್ರೀಕೃಷ್ಣದೇವರಾಯ ಮಹಾರಾಯರಿಗೆ ಜಯವಾಗಲಿ!'
ಜನಸ್ತೋಮ ಒಕ್ಕೊರಲಿನಿಂದ
'ಶ್ರೀಕೃಷ್ಣದೇವರಾಯ ಮಹಾರಾಯರಿಗೆ ಜಯವಾಗಲಿ!'"
ಎಂದು ಉದ್ಘೋಷಿಸಿತು.



# ಮೋಹನ ಮುರಾರಿ

ವಿಜಯನಗರದ ಇತಿಹಾಸದ ಪರ್ವಕಾಲದ(೧೪೬೬-೧೫೦೯) ಏರುಪೇರುಗಳು, ಸೋಲುಗೆಲವುಗಳು, ತ್ಯಾಗಭೋಗಗಳ ಸಮರದ ಇತಿವೃತ್ತವೇ “ಮೋಹನ ಮುರಾರಿ”ಯ ವಸ್ತು. ಎರಡು ರಾಜವಂಶಗಳು ಉರುಳುತ್ತವೆ. ಸಾಳ್ವಮನೆತನ ಸ್ಥಾಪಿಸಿದ ನರಸಿಂಹ ವಿಜಯನಗರ ಸಾಮ್ರಾಜ್ಯದ ಅಸ್ತಿತ್ವ ಕಾಪಾಡಿದ ಮಹಾಪುರುಷನಾಗಿದ್ದಾನೆ. ಅವನ ವಿಕ್ರಮ ಜೀವನ“ಮೋಹನ ಮುರಾರಿ”ಯಲ್ಲಿ ವಿಸ್ತಾರವಾಗಿ ನಿರೂಪಿತವಾಗಿದೆ. ಮುಳುಬಾಗಿಲ ಶ್ರೀಪಾದರಾಜರು, ಶ್ರೀವ್ಯಾಸರಾಯರು ಈ ಸಂಧಿ ಕಾಲದಲ್ಲಿ ವಿಜಯನಗರಕ್ಕೆ ಧಾರ್ಮಿಕ ತೇಜಸ್ಸನ್ನಿತ್ತು ಅದರ ಆತ್ಮವನ್ನು ಪರಿಪೋಷಿಸಿದ ಪುಣ್ಯಪುರುಷರು. ಅವರ ದಿವ್ಯ ಜೀವನ ಹಾಗೂ, ಬಹಮನಿಯ ಮಂತ್ರಿಯಾಗಿದ್ದ ಹುತಾತ್ಮ ಮಹಮುದ್ ಗವಾನನ ನಿಷ್ಕಳಂಕ ಜೀವನ ಈ ಕಾದಂಬರಿಯಲ್ಲಿ ಹಾಸುಹೊಕ್ಕಾಗಿ ಬಂದಿವೆ.

“ಮೋಹನ ಮುರಾರಿ”ಯಲ್ಲಿ ಅ.ನ.ಕೃ ಅವರ ಕಲಾನೈಪುಣ್ಯವಲ್ಲದೆ, ಅವರ ಸಂಶೋಧನ ಪರಿಜ್ಞಾನವೂ ಅಭಿವ್ಯಕ್ತವಾಗಿದೆ. ಇತಿಹಾಸಕಾರರು ಕೈಬಿಟ್ಟಿದ್ದ ಹಲವು ಸಮಸ್ಯೆಗಳನ್ನು ಬಿಡಿಸಿ, ವಿಜಯನಗರ ಸಾಮ್ರಾಜ್ಯದ ಸಮಗ್ರ ಇತಿಹಾಸ ರಚನೆಗೆ ಅ.ನ.ಕೃ ಅವರು ಮಹದುಪಕಾರಮಾಡಿದ್ದಾರೆ.

ಸ್ಟ್ಯಾಂಡರ್ಡ್ ಬುಕ್ ಡಿಪೋ
ಅವೆನ್ಯೂರೋಡ್ : ಬೆಂಗಳೂರು-೨.